ಶ್ರೀಮನ್ನಿಗಮಾಂತ ಮಹಾದೇಶಿಕ
ಪ್ರಣೀತವಾದ

# ಶರಣಾಗತಿ ದೀಪಿಕಾ



ಮುನ್ನುಡಿ
ಅನುವಾದ ಮತ್ತು ವಿವರಣೆ

ವೇದಾಂತ ವಿದ್ವಾನ್
ಡಾ॥ ಎನ್. ಎಸ್. ಅನಂತರಂಗಾಚಾರ್ಯ
ಮಂಡ್ಯ

ಶ್ರೀಮನ್ನಿಗಮಾಂತ ಮಹಾದೇಶಿಕ
ಪ್ರಣೀತವಾದ

# ಶರಣಾಗತಿ ದೀಪಿಕಾ



ಮುನ್ನುಡಿ
ಅನುವಾದ ಮತ್ತು ವಿವರಣೆ
ವೇದಾಂತ ವಿದ್ವಾನ್
**ಡಾ|| ಎನ್. ಎಸ್. ಅನಂತರಂಗಾಚಾರ್ಯ**
ಮಂಡ್ಯ

# ಅರಿಕೆ

ಶ್ರೀಮನ್ನಿಗಮಾಂತ ಮಹಾದೇಶಿಕರವರ ಉತ್ಸವದ ಸಂದರ್ಭದಲ್ಲಿ ಅವರ ಸ್ತೋತ್ರವೊಂದನ್ನು ಕನ್ನಡದ ಅನುವಾದ ಮತ್ತು ವಿವರಣೆಗಳೊಡನೆ ಪ್ರಕಟಗೊಳಿಸಬೇಕೆಂಬ ಆಶಯ ಶ್ರೀರಂಗಪಟ್ಟಣದ ವೇದಾಂತದೇಶಿಕ ಸಭೆಯವರ ಬೆಂಬಲ ಮತ್ತು ಆಸ್ತಿಕಮಹಾಜನರ ಪ್ರೋತ್ಸಾಹದಿಂದ ಸಫಲ ವಾಗುತ್ತಿದೆ. ಪ್ರಕೃತ ಸ್ತೋತ್ರವಾದ "ಶರಣಾಗತಿ ದೀಪಿಕೆ" ಈ ಮಾಲೆಯ ಐದನೆಯ ಕುಸುಮ. ಹೀಗೆಯೇ ಉಳಿದ ಸ್ತೋತ್ರಗಳನ್ನೂ ಕ್ರಮವಾಗಿ ಕನ್ನಡಾನುವಾದ ಮತ್ತು ವಿವರಣೆಗಳೊಡನೆ ಸಹೃದಯರಲ್ಲಿ ಸಮರ್ಪಿಸ ಬೇಕೆಂಬ ಹಂಬಲವಿದೆ.

ಈ ಸ್ತೋತ್ರದ ಪ್ರಕಟಣೆಗೆ ಅನೇಕರು ನೆರವಾಗಿದ್ದಾರೆ. ಹಿರಿಯರಾದ ವಿದ್ವಾನ್ ಹೆ. ಗೋಪಾಲಾಚಾರ್ಯರು ಮತ್ತು ಹೆಮ್ಮಿಗೆ ದೇಶಿಕಾಚಾರ್ಯರು ಅನೇಕ ಸಲಹೆಗಳನ್ನಿತ್ತಿದ್ದಾರೆ. ತೀರ್ಥರೂಪರಾದ ಎ. ಅನಂತರಂಗಾ ಚಾರ್ಯರು ಮುದ್ರಣದ ಸಮಸ್ತ ಭಾರವನ್ನೂ ವಹಿಸಿಕೊಂಡಿದ್ದಾರೆ. ಇವರಿಗೆಲ್ಲ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಶ್ರೀಮಾನ್‌ಗಳಾದ ತಂಗಲಿಯ ಸಾಹುಕಾರ್ ಕೃಷ್ಣಸ್ವಾಮ್ಯೈಯಂಗಾರ್ಯರು, ಮನ್ನಾರ್‌ಗುಡಿ ನಾರಾ ಯಣೈಯಂಗಾರ್ಯರು, ಡಾಕ್ಟರ್ ವೆಂಕಟಾಚಲೈಯಂಗಾರ್ಯರು, ಹೆಮ್ಮಿಗೆ ದೇಶಿಕಾಚಾರ್ಯರು, ಶ್ರೀರಂಗಪಟ್ಟಣದ ವೇದಾಂತದೇಶಿಕ ಸಭೆಯವರು— ಇವರೆಲ್ಲ ಉದಾರವಾಗಿ ಧನಸಹಾಯ ಮಾಡಿದ್ದಾರೆ. ಇವರಿಗೆಲ್ಲ ನನ್ನ ಅನಂತ ಪ್ರಣಾಮಗಳು.

ಈ ಸ್ತೋತ್ರವನ್ನು ಮೈಸೂರಿನಲ್ಲಿ ಬಿಜಯಮಾಡಿಸಿರುವ ಪರಮಹಂಸ ಪರಿವ್ರಾಜಕಾಚಾರ್ಯರಾದ ಶ್ರೀಮದಭಿನವರಂಗನಾಥ ಬ್ರಹ್ಮತಂತ್ರ ಪರಕಾಲಸ್ವಾಮಿಗಳವರಿಗೆ ಭಕ್ತಿಪೂರ್ವಕವಾಗಿ ಸಮರ್ಪಿಸಲು ಅಪ್ಪಣೆ ಇತ್ತುದಕ್ಕೆ ನಾನು ಶ್ರೀ ಸ್ವಾಮಿಗಳವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ.

ಹಾಗೆಯೇ ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀಮದಾಂಡವನ್ ಶ್ರೀ ವೇದಾಂತರಾಮಾನುಜ ಮಹಾದೇಶಿಕರವರು ತಮ್ಮ ದಿವ್ಯಹಸ್ತದಿಂದ ಈ

ಗ್ರಂಥವನ್ನು ಪ್ರಕಾಶಪಡಿಸಲು ಸಮ್ಮತಿ ಇತ್ತುದಕ್ಕಾಗಿ ಶ್ರೀಮುದಾಂಡವನ್ ಅವರಿಗೆ ಚಿರಋಣಿಯಾಗಿದ್ದೇನೆ.

ಕೊನೆಯಲ್ಲಿ ಅತ್ಯಲ್ಪಕಾಲದಲ್ಲಿ ಈ ಗ್ರಂಥವನ್ನು ಬಹು ಅಂದವಾಗಿ ಮುದ್ರಿಸಿಕೊಟ್ಟು ಸಹಾಯಮಾಡಿದ ಶ್ರೀ ಶಕ್ತಿ ಎಲೆಕ್ಟ್ರಿಕ್ ಮುದ್ರಣಾಲಯದ ಶ್ರೀ ರಾ. ವೆಂ. ಶ್ರೀನಿವಾಸಮೂರ್ತಿಗಳಿಗೆ ನನ್ನ ಕೃತಜ್ಞತೆಗಳು ಸಲ್ಲತಕ್ಕದ್ದಾಗಿದೆ.

ಸರ್ವಾಂತರ್ಯಾಮಿಯಾದ ದೀಪಪ್ರಕಾಶನು ಈ ಅಲ್ಪಸೇವೆಯಿಂದ ಸುಪ್ರೀತನಾಗಲೆಂದು ಬೇಡುತ್ತಿದ್ದೇನೆ.

ಮಂಡ್ಯ
ವಿಶ್ವಾವಸು ಸಂ। ಕಾ। ಬ। ೫
೧೩–೧೧–೧೯೬೫

ಇಂತು ಸಜ್ಜನವಿಧೇಯ
**ಎಂ. ಎಸ್. ಅನಂತರಂಗಾಚಾರ್ಯ**



ಶ್ರೀ ನಿಗಮಾಂತ ಮಹಾದೇಶಿಕರು

# ಸಮರ್ಪಣಂ

|| ಶ್ರೀಃ ||

ಶ್ರೀಮದ್ವೇದಮಾರ್ಗಪ್ರತಿಷ್ಠಾಪನಾಚಾರ್ಯ
ಪರಮಹಂಸಪರಿವ್ರಾಜಕಾಚಾರ್ಯ ಸರ್ವತಂತ್ರಸ್ವತಂತ್ರೋಭಯ
ವೇದಾಂತಾಚಾರ್ಯ
ಶ್ರೀಭಗವದ್ರಾಮಾನುಜಸಿದ್ಧಾಂತ ನಿರ್ಧಾರಣಸಾರ್ವಭೌಮ
ಶ್ರೀ ಲಕ್ಷ್ಮೀಹಯವದನ ದಿವ್ಯಪಾದುಕಾಸೇವಕ
**ಶ್ರೀಮದಭಿನವರಂಗನಾಥ ಬ್ರಹ್ಮತಂತ್ರ ಪರಕಾಲ**
**ಮಹಾದೇಶಿಕರವರ ಸನ್ನಿಧಿಯಲ್ಲಿ**

ಭಕ್ತಿಪುರಸ್ಸರವಾಗಿ ಈ ಗ್ರಂಥವು
ಅರ್ಪಿತವಾಗಿದೆ.

# ಪ್ರಕಾಶನಂ

|| ಶ್ರೀಃ ||

ಶ್ರೀಮದ್ವೇದಮಾರ್ಗಪ್ರತಿಷ್ಠಾಪನಾಚಾರ್ಯ
ಪರಮಹಂಸಪರಿವ್ರಾಜಕಾಚಾರ್ಯ
ಸರ್ವತಂತ್ರಸ್ವತಂತ್ರೋಭಯವೇದಾಂತಾಚಾರ್ಯ
ಶ್ರೀ ಭಗವದ್ರಾಮಾನುಜಸಿದ್ಧಾಂತನಿರ್ಧಾರಣ ಸಾರ್ವಭೌಮ
ಶ್ರೀಮನ್ನಾಥಮುನಿ ಶ್ರೀಮದ್ಯಾಮುನಮುನಿ
ಶ್ರೀಮದ್ರಾಮಾನುಜಮುನಿತ್ರಯಸಿದ್ಧಾಂತ ಸ್ಥಾಪನಾಚಾರ್ಯ
ಶ್ರೀಮದಾಂಡವನ್

**ಶ್ರೀ ವೇದಾಂತರಾಮಾನುಜ ಮಹಾದೇಶಿಕರವರ**

ಅಮೃತಹಸ್ತದಿಂದ ಪ್ರಕಾಶಿತವಾಗಿದೆ.

# ಅವತರಣಿಕೆ.



ಭಗವದ್ರಾಮಾನುಜರ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರವರ್ತನ ಗೊಳಿಸಿದ ಮಹಾನುಭಾವರಲ್ಲಿ ಶ್ರೀಮದ್ವೇಂಕಟನಾಥರು ಮುಖ್ಯರಾದವರು. ಇವರು ಕ್ರಿ. ಶ. 13 ನೇ ಶತಮಾನದಲ್ಲಿ ಅವತರಿಸಿ ಈ ಸಿದ್ಧಾಂತವನ್ನು ವಿಶದೀ ಕರಿಸಿ, ವಿವರಿಸಿ. ಸರ್ವತೋಭದ್ರವಾಗಿ ಸಂರಕ್ಷಿಸಿದರು. ಶ್ರೀಮದ್ವೇಂಕಟನಾಥರು ಸರ್ವಶ್ರೇಷ್ಠ ಕವಿಗಳೂ, ದಾರ್ಶನಿಕರೂ, ಪರಮಭಕ್ತರೂ ಆಗಿದ್ದರು. ಕವಿತಾ ರ್ಕಿಕ ಸಿಂಹರೆಂದೂ, ವೇದಾಂತಾಚಾರ್ಯರೆಂದೂ ವಿಖ್ಯಾತರಾದವರಿವರು. ಅಗಾಧವಾದ ಪಾಂಡಿತ್ಯ, ಉನ್ನತವಾದ ಪ್ರತಿಭೆ, ನಿರತಿಶಯವಾದ ಭಗವದ್ಭಕ್ತಿ, ಭಗವದಿತರವಾದುದರಲ್ಲಿ ಪರಮ ವೈರಾಗ್ಯ ಇವುಗಳಿಂದ ಶ್ರೀಮದಾಚಾರ್ಯರು ವಿಶ್ರುತರಾಗಿದ್ದಾರೆ. ಭರತವರ್ಷದ ಸಂತರ ಶ್ರೇಣಿಯಲ್ಲಿ ಆಚಾರ್ಯರಿಗೆ ಉನ್ನತ ಸ್ಥಾನವಿದೆ.

ಶ್ರೀಮದಾಚಾರ್ಯರು 'ತ್ರಿಂಶದ್ವಾರಂ ಶ್ರಾವಿತೆ ಶಾರೀರಕ ಭಾಷ್ಯಃ' ಎಂದು ತಾವೇ ತಿಳಿಸಿರುವಂತೆ ಮೂವತ್ತು ಬಾರಿ ಶ್ರೀ ಭಾಷ್ಯವನ್ನುಪದೇಶಿಸಿ ಜ್ಞಾನಪ್ರತಿಷ್ಠಾಪನೆ ಮಾಡಿದರು. ಇಷ್ಟೇ ಅಲ್ಲದೆ ಎಲ್ಲ ಕಾಲದ ಎಲ್ಲ ಜನರಿಗೂ ಉಪಕಾರವಾಗಲೆಂದು ಅನೇಕಾನೇಕ ಗ್ರಂಥಗಳನ್ನು ನಿರ್ಮಾಣ ಮಾಡಿದ್ದಾರೆ. ಆಚಾರ್ಯರು ಭಗವದ್ರಾಮಾನುಜರ ಕೃತಿರತ್ನಗಳಿಗೆ ಅಮೂಲ್ಯವಾದ ವ್ಯಾಖ್ಯಾನ ಗಳನ್ನೂ, ಭಾಷ್ಯಗಳನ್ನೂ, ವಿವರಣೆಗಳನ್ನೂ ರಚಿಸಿದ್ದಾರೆ. ತತ್ತ್ವ ಟೀಕೆ, ಅಧಿಕರಣ ಸಾರಾವಳೀ, ತಾತ್ಪರ್ಯಚಂದ್ರಿಕೆ, ಗದ್ಯಭಾಷ್ಯಗಳು, ಶತದೂಷಿಣೀ ಮುಂತಾದುವು ಈ ಗುಂಪಿಗೆ ಸೇರುತ್ತವೆ. ಇದಲ್ಲದೆ ಅನೇಕ ಸ್ವತಂತ್ರ ಗ್ರಂಥ ಗಳನ್ನೂ ಬರೆದು ಸಿದ್ಧಾಂತದ ಪ್ರಮೇಯಗಳನ್ನು ಸಮಗ್ರವಾಗಿ ನಿರೂಪಿಸಿದ್ದಾರೆ. ನ್ಯಾಯಸಿದ್ಧಾಂಜನ, ನ್ಯಾಯಪರಿಶುದ್ಧಿ, ತತ್ತ್ವಮುಕ್ತಾಕಲಾಪ, ಪಾಂಚರಾತ್ರ

ರಕ್ಷೆ, ಸಚ್ಚರಿತ್ರರಕ್ಷೆ, ಶ್ರೀಮದ್ರಹಸ್ಯತ್ರಯಸಾರ ಮುಂತಾದುವು ಈ ಬಗೆಯ ಕೃತಿಗಳು. ಇಂಥ ಉದ್ದಾಮವಾದ ಶಾಸ್ತ್ರಗ್ರಂಥಗಳನ್ನು ರಚಿಸಿದಂತೆಯೇ ಯಾದವಾಭ್ಯುದಯ, ಹಂಸಸಂದೇಶ, ಸಂಕಲ್ಪಸೂರ್ಯೋದಯ, ಮುಂತಾದ ಸುಂದರ ಕಾವ್ಯರತ್ನಗಳನ್ನು ಆಚಾರ್ಯರು ಬರೆದಿದ್ದಾರೆ. ಕೇವಲ ಸಂಸ್ಕೃತ ಭಾಷೆಯಲ್ಲಿಯೇ ಅಲ್ಲದೆ ತಮಿಳು, ಪ್ರಾಕೃತ ಮುಂತಾದವುಗಳಲ್ಲಿಯೂ ಆಚಾರ್ಯರು ಗ್ರಂಥ ನಿರ್ಮಾಣಮಾಡಿರುವುದು ಅವರ ಅಸದೃಶವಾದ ಪಾಂಡಿತ್ಯಕ್ಕೆ ಸಾಕ್ಷಿಯಾಗಿದೆ. ಆಳ್ವಾರರುಗಳು ಹಾಡಿದ ತಮಿಳು ಪ್ರಬಂಧಗಳ ಸಾರಾರ್ಥವನ್ನು ಮಥಿಸಿ ತೆಗೆದು 'ದ್ರವಿಡೋಪನಿಷತ್ತಾತ್ಪರ್ಯ ರತ್ನಾವಳೀ, ದ್ರವಿಡೋಪನಿಷತ್ತಾತ್ಪರ್ಯ ಸಂಗ್ರಹ' ಮುಂತಾದ ಸಂಸ್ಕೃತ ಪದ್ಯಗ್ರಂಥಗಳಲ್ಲಿ ಉದ್ಧರಿಸಿದ್ದಾರೆ. ಆಳ್ವಾರರುಗಳ ತಮಿಳು ಪ್ರಬಂಧಗಳಿಗೆ ಸಾಟಿಯಾಗಿ 'ದೇಶಿಕ ಪ್ರಬಂಧ' ವೆಂದು ಪ್ರಸಿದ್ಧವಾಗಿರುವ ತಮಿಳು ಪದ್ಯರಾಶಿಯಲ್ಲಿ ತತ್ತ್ವಹಿತ ಪುರುಷಾರ್ಥಗಳ ನಿರೂಪಣೆಯನ್ನು ಬಹಳ ಮಾರ್ಮಿಕವಾಗಿ ಮಾಡಿದ್ದಾರೆ ಇಷ್ಟೇ ಅಲ್ಲ. ತಮ್ಮ ಪರಿಪಕ್ವವಾದ ಭಾವಸಮಾಧಿಯನ್ನು ಪ್ರತಿಫಲಿಸುವ ಸರಳಸುಂದರ ಸ್ತೋತ್ರಗಳಲ್ಲಿ ತಮ್ಮ ಅನಿರ್ವಚನೀಯವಾದ ಭಗವದ್ಭಕ್ತಿಯ ಹೊನಲನ್ನೇ ಹರಿಸಿದ್ದಾರೆ. ಶ್ರೀಮದಾಚಾರ್ಯರು ಎಷ್ಟು ದೊಡ್ಡ ಶಾಸ್ತ್ರಜ್ಞರೋ ಅಷ್ಟೇ ದೊಡ್ಡ ಕವಿಗಳು ಹೇಗೆ ಅವರು ಮಹಾ ಕವಿಗಳಾಗಿದ್ದಾರೆಯೋ ಹಾಗೆಯೇ ಮಹಾಭಕ್ತರೂ ಆಗಿದ್ದಾರೆ. ಪಾಂಡಿತ್ಯ, ಕವಿತ್ವ ಮತ್ತು ಭಕ್ತಿಗಳ ಅಪೂರ್ವ ಸಂಗಮವೇ ಆಚಾರ್ಯರ ರೂಪದಲ್ಲಿ ಮೈದೋರಿದೆ.

ಭಗವದ್ರಾಮಾನುಜರು ಸೂಕ್ಷ್ಮವಾಗಿ ಉಪದೇಶಿಸಿದ ಪ್ರಪತ್ತಿಶಾಸ್ತ್ರವನ್ನು ಶಾಸ್ತ್ರ, ಸಂಪ್ರದಾಯ ಮತ್ತು ಅನುಷ್ಠಾನ ಇವುಗಳಿಗೆಲ್ಲಾ ಸರಿಹೋಗುವಂತೆ ವಿವರಿಸಿದ ಯಶಸ್ಸು ಶ್ರೀಮದ್ವೇಂಕಟನಾಥರದು. ಶರಣಾಗತಿಯ ಸ್ವರೂಪ ಪರಿಕರಗಳು, ಅನುಷ್ಠಾನಕ್ರಮ, ಮಹತ್ವ ಮುಂತಾದುವನ್ನೂ ಶರಣಾಗತಿಗೆ ಅಧಿಕಾರ, ಶರಣಾಗತಿ ಮಾಡಿದ ನಂತರ ಮಾಡಬೇಕಾದ ಉತ್ತರಕೃತ್ಯಗಳು ಮುಂತಾದುವನ್ನೂ, ಮೋಕ್ಷಸಾಧನೆಗಳಲ್ಲಿ ಪ್ರಪತ್ತಿಯ ಸ್ಥಾನವನ್ನೂ ಶ್ರೀಮದಾಚಾರ್ಯರು ತಮ್ಮ ಶ್ರೀಮದ್ರಹಸ್ಯತ್ರಯಸಾರದಲ್ಲಿ ನಿಷ್ಕೃಷ್ಟವಾಗಿ ಪ್ರತಿಪಾದಿಸಿ ಪ್ರಪತ್ತಿಶಾಸ್ತ್ರದ ಇತಿಮಿತಿಗಳನ್ನು ನಿರ್ಧರಿಸಿದ್ದಾರೆ. ಪ್ರಪತ್ತಿಶಾಸ್ತ್ರದ ಮೇಲೆ

ಬರಬಹುದಾದ ಆಕ್ಷೇಪಗಳಿಗೆಲ್ಲಾ ಸಮಂಜಸವಾದ ಉತ್ತರಗಳನ್ನು ಹೇಳಿ ಈ ಸಿದ್ಧಾಂತದ ಮಹತ್ವವನ್ನು ತಮ್ಮ 'ನಿಕ್ಷೇಪರಕ್ಷೆ' ಎಂಬ ಸಂಸ್ಕೃತ ಗ್ರಂಥ ದಲ್ಲಿಯೂ ಪ್ರತಿಪಾದಿಸಿದ್ದಾರೆ. ಆಚಾರ್ಯರು ತಮ್ಮ ಅಮೂಲ್ಯವಾದ ಕೃತಿಗಳಲ್ಲಿ ಈ ಸಿದ್ಧಾಂತವನ್ನು ಹೀಗೆ ವಿವರಿಸದೆ ಹೋಗಿದ್ದರೆ 'ಶರಣಾಗತಿ ಸಿದ್ಧಾಂತವು' ಎಂದೆಂದಿಗೂ ಸಂದಿಗ್ಧವಾಗಿಯೇ ಉಳಿದು ಹೋಗಿರುತ್ತಿದ್ದಿತು. ಹೀಗೆ ಪ್ರಪತ್ತಿ ಸಂಪ್ರದಾಯದ ಸಮರ್ಥನೆ ಮತ್ತು ಪ್ರತಿಷ್ಠಾಪನೆಗಳು ಶ್ರೀಮನ್ನಿಗಮಾಂತ ದೇಶಿಕರವರು ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಸಲ್ಲಿಸಿರುವ ಅತಿ ಮುಖ್ಯವಾದ ಕಾಣಿಕೆಗಳಾಗಿವೆ.

ಶ್ರೀಮದಾಚಾರ್ಯರು ಈ ಶರಣಾಗತಿ ಸಿದ್ಧಾಂತವನ್ನು ಶಾಸ್ತ್ರೀಯವಾಗಿ ಶಾಸ್ತ್ರಗ್ರಂಥಗಳಲ್ಲಿ ಪ್ರತಿಪಾದಿಸಿರುವಂತೆಯೇ ಭಾವಪೂರ್ಣವಾದ ತಮ್ಮ ಸ್ತೋತ್ರ ಗಳಲ್ಲಿಯೂ ಮನಮುಟ್ಟುವಂತೆ ನಿರೂಪಿಸಿದ್ದಾರೆ. ಭಗವಂತನ ಸ್ವರೂಪ ರೂಪ ಗುಣಗಳನ್ನು ಅನುಸಂಧಾನ ಮಾಡುತ್ತಾ ಅವನ ಕಾರುಣ್ಯ, ವಾತ್ಸಲ್ಯ, ಸೌಶೀಲ್ಯ ಮುಂತಾದ ಗುಣಗಳಲ್ಲಿ ಮಗ್ನರಾಗಿದ್ದಾರೆ. ಆಚಾರ್ಯರ ಸ್ತೋತ್ರ ಗಳೆಲ್ಲಾ ಸರ್ವಶರಣ್ಯನಾದ ಪರಮಾತ್ಮನಲ್ಲಿ ಅನನ್ಯಭಾವದಿಂದ ಮಾಡಿದ ಆತ್ಮ ನಿವೇದನವಾಗಿವೆಯಾದರೂ ಕೆಲವು ಸ್ತೋತ್ರಗಳು ಪ್ರಪತ್ತಿಶಾಸ್ತ್ರಸ್ವರೂಪವನ್ನು ಪ್ರಧಾನವಾಗಿ ನಿರೂಪಿಸುತ್ತವೆ. ನ್ಯಾಸದಶಕ, ನ್ಯಾಸತಿಲಕ, ನ್ಯಾಸವಿಂಶತಿ, ಶರಣಾಗತಿದೀಪಿಕೆ ಮುಂತಾದವು ಇವು. ನ್ಯಾಸ, ಶರಣಾಗತಿ ಎಂಬ ಹೆಸರು ಗಳನ್ನೇ ಈ ಸ್ತೋತ್ರಗಳಿಗೆ ಇಟ್ಟಿರುವುದು ಅನ್ವರ್ಥವಾಗಿದೆ ಇವು ನ್ಯಾಸವಿದ್ಯೆ ಯನ್ನು ನಿರೂಪಿಸುವ ಸ್ತೋತ್ರಗಳಾಗಿವೆ. ಇವುಗಳಲ್ಲೆಲ್ಲಾ ನ್ಯಾಸದಶಕ ಅತ್ಯಂತ ಚಿಕ್ಕದು. ಶರಣಾಗತಿದೀಪಿಕೆ ದೊಡ್ಡದು. ಲಲಿತವಾದ ಹತ್ತೇ ಹತ್ತು ಅನುಷ್ಟುಪ್ ಶ್ಲೋಕಗಳಲ್ಲಿ ಈ ಸಿದ್ಧಾಂತದ ಸಾರಸರ್ವಸ್ವವನ್ನೂ ನ್ಯಾಸದಶಕದಲ್ಲಿ ನಿರೂಪಿ ಸಿದ್ದಾರೆ. ಅದರ ವಿಸ್ತೃತವಾದ ನಿರೂಪಣೆ ಶರಣಾಗತಿ ದೀಪಿಕೆಯಲ್ಲಿದೆ ಶರಣಾ ಗತಿ ಸಿದ್ಧಾಂತವನ್ನು ಪ್ರಕಾಶಪಡಿಸುವ ದೀವಿಗೆಯಾಗಿದೆ ಈ ಸ್ತೋತ್ರ. ಭಗ ವಂತನನ್ನೇ ತೋರಿಸಿಕೊಡುವ ಶರಣಾಗತಿ ಎಂಬ ದೀವಿಗೆಯೂ ಇದೇ ಆಗಿದೆ. ಈ ಸ್ತೋತ್ರದಲ್ಲಿ ೫೯ ಶ್ಲೋಕಗಳಿವೆ. ಇವುಗಳಲ್ಲಿ ನಿರೂಪಿಸಿರುವ ವಿಷಯಗಳನ್ನು ಮುಂದೆ ಸಂಗ್ರಹಿಸಿದೆ.

*　　*　　*　　*

ಈ ಸ್ತೋತ್ರದ ಮೊದಲನೆಯ ಶ್ಲೋಕದಲ್ಲಿಯೇ ಶರಣಾಗತಿ ಸಂಪ್ರದಾಯದ ಮಹತ್ತ್ವವನ್ನು ಆಚಾರ್ಯರು ಹೇಳಿದ್ದಾರೆ. "ಯತೀಶ್ವರ ಮಹಾನಸ ಸಂಪ್ರದಾಯ" ವೆಂದು ಇದನ್ನು ಹೇಳಿ ಶರಣಾಗತಿ ಸಂಪ್ರದಾಯವು ಭಗವದ್ರಾಮಾನುಜರಿಗೆ ಬಹಳ ಹೃದ್ಯತಮವಾದುದೆಂದು ತೋರಿದ್ದಾರೆ. ಈ ಸ್ತೋತ್ರರೂಪದಲ್ಲಿ ಅದು ಪರಿಪಾಕಗೊಳ್ಳುವುದೆಂದೂ ಬಹಳ ವಿಶ್ವಸನೀಯವೂ, ಆಪ್ತತಮವೂ ಆದ ಪರಂಪರೆಯಿಂದ ಈ ರಹಸ್ಯಾರ್ಥಗಳು ತಮಗೆ ಲಭ್ಯವಾದವೆಂದೂ ಸೂಚಿಸಿದ್ದಾರೆ. ಯತೀಶ್ವರ ಪಾಕಶಾಲೆಯಲ್ಲಿ ಬಳಸುವ ಪದಾರ್ಥಗಳು ಪ್ರಾಕೃತ ಪದಾರ್ಥಗಳಲ್ಲ. ಜ್ಞಾನ ಭಕ್ತಿ ವೈರಾಗ್ಯಗಳನ್ನುಂಟುಮಾಡುವ ಸ್ವಸ್ವರೂಪ, ಬ್ರಹ್ಮಸ್ವರೂಪ, ಬ್ರಹ್ಮಪ್ರಾಪ್ತ್ಯುಪಾಯ, ಫಲ ಮುಂತಾದುವು ಅವು ಮುಕ್ತಭೋಗ್ಯವಾದ ಬ್ರಹ್ಮಾನಂದವೇ ಇಲ್ಲಿ ಲಭಿಸುತ್ತದೆ. ಹೀಗೆ ಪ್ರಥಮ ಶ್ಲೋಕದಲ್ಲಿಯೇ ಪ್ರಪತ್ತಿಸಿದ್ಧಾಂತದ ಮಹತ್ವವನ್ನು ಸೂಚಿಸಿ ಸಿದ್ಧಾಂತವೇದಿಗಳೂ, ನಿರ್ಮತ್ಸರರೂ ಆದವರು ಇದರ ಜ್ಞಾನವನ್ನೂ ಪ್ರಯೋಜನವನ್ನೂ ಪಡೆಯಲಿ ಎಂದು ಹಾರೈಸಿದ್ದಾರೆ.

ಇಂಥ ಶರಣಾಗತಿಯನ್ನು ಯಾರಲ್ಲಿ ಮಾಡಬೇಕೆಂಬುದನ್ನೂ ಹಾಗೆ ಮಾಡಿದರೆ ಲಭಿಸುವ ಪ್ರಯೋಜನವೇನೆಂಬುದನ್ನೂ ಆಚಾರ್ಯರು ಮುಂದೆ ನಿರೂಪಿಸುತ್ತಾರೆ.

ಒಬ್ಬ ಜೀವನಿಗೆ ಮತ್ತೊಬ್ಬ ಜೀವ ರಕ್ಷಕನಾಗಲಾರನು. ಸರ್ವೇಶ್ವರನಾದ ಭಗವಂತನೇ ಎಲ್ಲರಿಗೂ ರಕ್ಷಕ. ನಮ್ಮ ಅಜ್ಞತ್ವ, ಅಲ್ಪತ್ವಗಳನ್ನು ಮನಗಂಡು ಸರ್ವಜ್ಞನೂ, ಸರ್ವಶಕ್ತನೂ, ಸರ್ವಾಂತರನೂ, ಸರ್ವರಕ್ಷಕನೂ ಆದ ಭಗವಂತನಲ್ಲಿ ಅನನ್ಯಭಾವದಿಂದ ಶರಣಾಗದೆ ನಮಗೆ ಯಾವ ಫಲವೂ ಲಭಿಸದು.

ಭಗವಂತನು ಲೋಕಕ್ಕೆಲ್ಲಾ ಧಾರಕನೂ, ನಿಯಾಮಕನೂ, ಶೇಷಿಯೂ ಆಗಿ ರಕ್ಷಕನೂ ಆಗಿದ್ದಾನೆಂಬುದನ್ನು 'ಅವಿಶ್ಯಧಾರಯಸಿ ವಿಶ್ವಮುಮುಷ್ಯಯನ್ತಾ' ಎಂದು ಪ್ರತಿಪಾದಿಸಿದ್ದಾರೆ. (ಶ್ಲೋ. ೬)

ಅತ್ಯಾಶ್ಚರ್ಯಕರವಾದ ಈ ಪ್ರಪಂಚವನ್ನು ಸೃಜಿಸಿ ನಿಲ್ಲಿಸಿರುವವನು ಅವನು. ಈ ಚೇತನಾ ಚೇತನ ಪದಾರ್ಥಗಳಲ್ಲಿ ಅಂತರ್ಯಾಮಿಯಾಗಿ ಇವು

ಗಳನ್ನು ಧರಿಸಿರುವವನೂ ಅವನೇ. ಇವುಗಳೆಲ್ಲಕ್ಕೂ ಆತ್ಮನಾಗಿರುವವನು ಅವನೇ. ಶ್ರುತಿಗಳು 'ಯಸ್ಯಪೃಥಿವೀ ಶರೀರಂ' 'ಯಸ್ಯಾತ್ಮಾ ಶರೀರಂ' ಎಂಬ ಉದ್ಘೋಷಿಸಿ ಈ ಚರಾಚರಾತ್ಮಕವಾದ ಜಗತ್ತು ಅವನಿಗೇ ಶರೀರವಾಗಿದೆ ಯೆಂದು ತಿಳಿಸುತ್ತಿವೆ. ಹೇಗೆ ನಮ್ಮ ಆತ್ಮನು ನಮ್ಮ ದೇಹಕ್ಕೆ ಧಾರಕನೂ, ನಿಯಾಮಕನೂ ಆಗಿ ನಮ್ಮ ದೇಹಕ್ಕೆ ಸ್ವಾಮಿಯಾಗಿದ್ದಾನೆಯೋ ಹಾಗೆಯೇ ಭಗವಂತನು ಚರಾಚರಾತ್ಮಕವಾದ ಜಗತ್ತಿಗೆ ಧಾರಕನಾಗಿದ್ದಾನೆ; ನಿಯಾಮಕ ನಾಗಿದ್ದಾನೆ; ಸ್ವಾಮಿಯಾಗಿದ್ದಾನೆ. ಈ ಕಾರಣದಿಂದಲೇ ಅವನು ಎಲ್ಲಕ್ಕೂ ಆತ್ಮನಾಗಿದ್ದಾನೆ. ಈ ಜಗತ್ತಿನ ಇರವು ಅವನನ್ನಾಶ್ರಯಿಸಿದೆ. ಈ ಜಗತ್ತಿನ ಕಾರ್ಯಪ್ರವೃತ್ತಿ ಅವನ ಸಂಕಲ್ಪಕ್ಕನುಗುಣವಾಗಿದೆ. ಇವೆಲ್ಲಕ್ಕೂ ಸ್ವಾಮಿಯಾದ ದೇವನು ಇವುಗಳಿಂದ ಅತಿಶಯವನ್ನು ಪಡೆಯುವವನಾಗಿದ್ದಾನೆ. 'ಪತಿಂ ವಿಶ್ವ ಸ್ಯಾತ್ಮೇಶ್ವರಂ' ಎಂದು ಶ್ರುತಿ ವರ್ಣಿಸುವುದು ಇದನ್ನೇ. ಹೀಗೆ ಸರ್ವಾತ್ಮಕ ನಾಗಿರುವುದರಿಂದಲೇ ಭಗವಂತನು ಸರ್ವಶಬ್ದವಾಚ್ಯನೂ ಆಗಿದ್ದಾನೆಂಬುದನ್ನು "ಸರ್ವಾಗಿರಸ್ತ್ವಯಿಪತಂತಿ ತತೋಽಸಿಸರ್ವಃ" ಎಂದು (ಶ್ಲೋಕ ೭) ಆಚಾ ರ್ಯರು ಕೊಂಡಾಡಿದ್ದಾರೆ.

ಶರೀರವನ್ನು ಹೇಳುವ ಮಾತುಗಳು ಶರೀರಿಗೆ ಅನ್ವಯಿಸುವುದು ಸಹಜ. ಈ ವಿಶ್ವವೇ ಅವನಿಗೆ ಶರೀರವಾದ ಕಾರಣ ವಿಶ್ವದ ಪದಾರ್ಥಗಳನ್ನು ಹೇಳುವ ಎಲ್ಲ ಶಬ್ದಗಳೂ ಸರ್ವಾಂತರನಾದ ಭಗವಂತನಿಗೇ ಅನ್ವಯಿಸುತ್ತವೆ. "ಸರ್ವೇ ವೇದಾ ಯತ್ಪದಮಾಮನಂತಿ" "ಸರ್ವೇವೇದಾ ಯತ್ರೈಕಂ ಭವಂತಿ"

ಏನಮೇಕೇ ವದಂತ್ಯಗ್ನಿಂ ಮರುತೋಽನ್ಯೇ ಪ್ರಜಾಪತಿಮ್ |
ಇಂದ್ರಮೇಕೇಽಪರೇಪ್ರಾಣಂ ಅಪರೇ ಬ್ರಹ್ಮಶಾಶ್ವತಮ್ ||

ಎಂಬಂತೆ ಅಗ್ನ್ಯಾದಿ ಶಬ್ದಗಳು ಸರ್ವಾಂತರಾತ್ಮನಾದ ಪರಮಾತ್ಮನನ್ನೇ ಹೇಳು ತ್ತವೆ. ಎಲ್ಲ ವಸ್ತುಗಳಿಗೂ ಪರಮಾತ್ಮನು ಅಂತರ್ಯಾಮಿಯಾದ ಕಾರಣ, ಎಲ್ಲ ವಸ್ತುಗಳೂ ಭಗವಂತನ ಶರೀರವಾದ ಕಾರಣ, ಎಲ್ಲ ಶಬ್ದಗಳೂ ಆತ್ಮಪರ್ಯಂತ್ರ ವಾಗಿ ಬೋಧಿಸುವ ಕಾರಣ ಪರಮಾತ್ಮನನ್ನೇ ಎಲ್ಲ ಶಬ್ದಗಳೂ ಹೇಳುತ್ತವೆ. ಭಗವಂತನು ಸರ್ವಶಬ್ದವಾಚ್ಯನಾಗಿರುವನೆಂದು 'ಚರಾಚರವ್ಯಪಾಶ್ರಯಸ್ತು

ಸ್ಯಾತ್ ತದ್ವ್ಯಪದೇಶೋ ಭಾಕ್ತಸ್ತದ್ಭಾವ ಭಾವಿತ್ವಾತ್ ' ಎಂಬ ಸೂತ್ರದಲ್ಲಿ ತಿಳಿಸಿದೆ. 'ಸರ್ವಂ ಖಲ್ವಿದಂ ಬ್ರಹ್ಮ' 'ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ' 'ಜ್ಯೋತೀಂಷಿ ವಿಷ್ಣುರ್ಭುವನಾನಿ ವಿಷ್ಣುಃ' ಮುಂತಾದ ಪ್ರಮಾಣ ಗಳು ಇದನ್ನು ಸಮರ್ಥಿಸುತ್ತವೆ. ಹೀಗೆ ಭಗವಂತನು ಸರ್ವಾತ್ಮನಾಗಿ ಸರ್ವಾಧಿ ಕನೂ, ಸರ್ವಶಬ್ದವಾಚ್ಯನೂ ಆಗಿದ್ದಾನೆ.

ನಾವು ಸ್ವತಂತ್ರರೆಂಬ ಭ್ರಮೆಯು ಜಾರಬೇಕಾದರೆ ಈ ಅರಿವು ನಮ್ಮಲ್ಲಿ ಮೂಡಬೇಕು. ನಾವು ಭಗವಂತನಿಗೆ ದಾಸಭೂತರಾಗಿರುವಕಾರಣ ನಮ್ಮ ಸ್ವಾಮಿ ಯಾದ ಅವನಿಗೆ ಅತಿಶಯವನ್ನುಂಟುಮಾಡುವುದೇ ನಮಗೆ ಸ್ವರೂಪ ಪ್ರಾಪ್ತ ವಾದುದು. ನಾವು ಅವನಿಗೆ ಶೇಷಭೂತರಾದ ಕಾರಣ, ಅವನನ್ನುಳಿದು ನಾವಿಲ್ಲದ ಕಾರಣ ನಮಗೆ ಒಡೆಯನಾದ ಸರ್ವಶೇಷಿಯನ್ನು ಸೇರುವುದೇ ನಮಗೆ ಪರಮ ಪುರುಷಾರ್ಥ. ನಮಗೆ ಸರ್ವಸ್ವಾಮಿಯಾದ ಅವನ ಸೇವೆಯನ್ನು ಪಡೆಯಲು ನಾವು ಹಾತೊರೆಯುವಂತೆ ಮಾಡುವುದು ಈ ಶೇಷತ್ವ ಜ್ಞಾನ.

ಭಗವಂತನು ಪುರುಷೋತ್ತಮನೆಂದು ಯಾವಾತನು ತಿಳಿಯುವನೋ ಅವನೇ ಲೋಕದಲ್ಲಿ ಎಲ್ಲವನ್ನೂ ತಿಳಿದವನು ಎಂಬುದಾಗಿ ಆಚಾರ್ಯರು "ಇತ್ಯಾದಿ ಲಕ್ಷಣಗಣೈಃ ಪುರುಷೋತ್ತಮಂ ತ್ವಾಂ ಜಾನಾತಿ ಯೋ ಜಗತಿ ಸರ್ವ ವಿದೇಷ ಗೀತಃ" (ಶ್ಲೋಕ ೬) ಎಂದು ನಿರೂಪಿಸಿದ್ದಾರೆ. ಭಗವಂತನು ಅರ್ಜುನ ನಿಗೆ ಉಪದೇಶಿಸುವ ಸಮಯದಲ್ಲಿ ತನ್ನ ಸ್ವರೂಪವನ್ನು–

"ದ್ವಾವಿಮೌ ಪುರುಷೌಲೋಕೇ ಕ್ಷರಶ್ಚಾಕ್ಷರ ಏವ ಚ ।
ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರಉಚ್ಯತೇ ॥
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾ ಹೃತಃ ।
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥
ಯಸ್ಮಾತ್ಕ್ಷರಮತೀತೋಽಹಂ ಅಕ್ಷರಾದಪಿ ಚೋತ್ತಮಃ ।
ಅತೋಽಸ್ಮಿ ಲೋಕೇ ವೇದೇಚ ಕಥಿತಃ ಪುರುಷೋತ್ತಮಃ ॥"

ಎಂದು ತಿಳಿಸಿದ್ದಾನೆ. ಭಗವಂತನು ಬದ್ಧಮುಕ್ತಾತ್ಮರಿಗಿಂತಲೂ, ಪ್ರಕೃತಿ ಗಿಂತಲೂ ಬೇರೆಯಾಗಿ ಅವುಗಳೆಲ್ಲವನ್ನೂ ವ್ಯಾಪಿಸುವವನಾಗಿ, ನಿಯಮಿಸುವವ

ನಾಗಿ ಅವುಗಳಿಗೆಲ್ಲ ಸ್ವಾಮಿಯಾಗಿರುವವನಾಗಿದ್ದಾನೆ. ಅವನನ್ನು ಪುರುಷೋತ್ತಮನೆಂದು ತಿಳಿಯುವವನು 'ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ' ಎಂದಂತೆ ಸರ್ವಭಾವದಿಂದ ಭಗವಂತನಲ್ಲಿ ತನ್ನನ್ನು ಸಮರ್ಪಣ ಮಾಡಿಕೊಳ್ಳುವನು. (ಶ್ಲೋಕ ೬)

ಭಗವಂತನು ಸಕಲಕಲ್ಯಾಣ ಗುಣಾಕರನಾಗಿದ್ದಾನೆ; ಹೇಯಪ್ರತಿಭಟನಾಗಿದ್ದಾನೆ. ಈ ಉಭಯ ಲಿಂಗತ್ವ ಅವನಲ್ಲಿದೆ. 'ಅಪಹತಪಾಪ್ಮಾ ವಿಜರೋವಿಮೃತ್ಯುರ್ವಿಶೋಕಃ ವಿಜಿಘತ್ಸಃ ಅಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ' ಎಂಬ ಶ್ರುತಿ ಭಗವಂತನ ಉಭಯಲಿಂಗತ್ವವನ್ನು ಸ್ಥಾಪಿಸುತ್ತದೆ. ಭಗವಂತನಲ್ಲಿರುವ ಕಲ್ಯಾಣಗುಣಗಳು ಅಸಂಖ್ಯವಾದುವು. "ಇಷುಕ್ಷಯಾನ್ನಿವರ್ತಂತೇ ನಾಂತರಿಕ್ಷಕ್ಷಿತಿಕ್ಷಯಾತ್ | ಮತಿಕ್ಷಯಾನ್ನಿವರ್ತಂತೇ ನ ಗೋವಿಂದಗುಣಕ್ಷಯಾತ್ ||" ಎಂಬಂತೆ ನಮ್ಮ ಎಣಿಕೆಗೆ ಮೀರಿದವು ಅವು. ಅವುಗಳಲ್ಲಿ ಪ್ರಧಾನವಾದವು ಆರು ಗುಣಗಳು. "ಜ್ಞಾನಂ ಬಲಂ ನಿಯಮನಕ್ಷಮತಾಥ ವೀರ್ಯಂ ಶಕ್ತಿಶ್ಚ ತೇಜ ಇತಿತೇಗುಣಷಟ್ಕಮಾದ್ಯಮ್" ಎಂದು ಆಚಾರ್ಯರು ಅವುಗಳನ್ನು ಇಲ್ಲಿ ನಿರೂಪಿಸಿದ್ದಾರೆ. ಸರ್ವವನ್ನೂ ಸ್ವತಃ ಸಾಕ್ಷಾತ್ಕರಿಸಿಕೊಳ್ಳುವುದು **ಜ್ಞಾನ.** ಶ್ರಮಪ್ರಸಂಗವೇ ಇಲ್ಲದೆ ಎಲ್ಲವನ್ನೂ ಧಾರಣಮಾಡುವ ಸಾಮರ್ಥ್ಯವೇ **ಬಲ.** ಯಾರಿಂದಲೂ ಅಡ್ಡಿಪಡಿಸಲಾಗದಂಥ ಸಂಕಲ್ಪವನ್ನು ಹೊಂದಿರುವುದು **ನಿಯಮನ ಸಾಮರ್ಥ್ಯ.** ಎಲ್ಲದಕ್ಕೂ ಕಾರಣವಾಗಿದ್ದರೂ, ಎಲ್ಲವನ್ನು ಧರಿಸಿದ್ದರೂ, ಎಲ್ಲವನ್ನು ನಿಯಮಿಸುತ್ತಿದ್ದರೂ ತಾನು ಸರ್ವಥಾ ವಿಕಾರರಹಿತನಾಗಿರುವುದು **ವೀರ್ಯ.** ಎಲ್ಲದಕ್ಕೂ ಉಪಾದಾನವಾಗಿರುವಿಕೆಯೇ **ಶಕ್ತಿ.** ಎಲ್ಲ ಬಗೆಯ ಕಾರ್ಯವಿಧಾನದಲ್ಲಿ ಇತರರ ಸಹಕಾರದ ಅಪೇಕ್ಷೆಯೇ ಇಲ್ಲದಿರುವುದು **ತೇಜಸ್ಸು.** ಈ ಆರು ಗುಣಗಳು ಬಹಳ ಪ್ರಧಾನವಾದವು.

ತವಾನಂತಗುಣಸ್ಯಾಪಿ ಷಡೇವ ಪ್ರಥಮೇ ಗುಣಾಃ |
ಯೈಸ್ತ್ವಯೈವ ಜಗತ್ಕುಕ್ಷಾವನ್ಯೇಪ್ಯಂತರ್ನಿವೇಶಿತಾಃ ||

ಎಂಬುದರಿಂದ ಆಶ್ರಿತರ ಸಂಗ್ರಹಣ, ರಕ್ಷಣ ಮುಂತಾದುವುಗಳಿಗೆ ಉಪಯುಕ್ತವಾಗುವ ಇತರ ಗುಣಗಳೆಲ್ಲಾ ಈ ಆರು ಗುಣಗಳ ವಿಸ್ತಾರವೆಂದು ಗೊತ್ತಾಗು

ವುದು. ಇವುಗಳಲ್ಲಿ ಒಂದೊಂದು ಗುಣವೂ ಅವಾಂತರ ಗುಣಗಳ ಪ್ರವಾಹಕ್ಕೆ ಮೂಲವಾಗಿದೆ.

ಯಥಾರತ್ನಾನಿ ಜಲಧೇರಸಂಖ್ಯೇಯಾನಿ ಪುತ್ರಕ ।
ತಥಾ ಗುಣಾಹ್ಯನಂತಸ್ಯಾಪ್ಯಸಂಖ್ಯೇಯಾ ಮಹಾತ್ಮನಃ ॥

ಎಂದು ಇದನ್ನು ಅನುಸಂಧಾನ ಮಾಡಿದ್ದಾರೆ. (ಶ್ಲೋಕ ೮)

ಭಗವಂತನಲ್ಲಿ ಅವನ ಸರ್ವಶಕ್ತಿತ್ವವೇ ಮೊದಲಾದ ಪರತ್ವೋಪಯುಕ್ತವಾದ ಗುಣಗಳಿರುವಂತೆ ಸೌಲಭ್ಯೋಪಯುಕ್ತವಾದ ಗುಣಗಳೂ ಅಸಂಖ್ಯವಾಗಿವೆ. ಅವನು ಈ ಪ್ರಪಂಚವನ್ನು ಸೃಜಿಸಿ ಕರುಣೆಯಿಂದ ಚೇತನರಿಗೆ ಶರೀರಾದಿಗಳನ್ನು ಕೊಟ್ಟು ಅವರು ಸಾಧನಾನುಷ್ಠಾನಗಳಿಂದ ತನ್ನನ್ನು ಪಡೆಯುವ ಅವಕಾಶವನ್ನು ಕೊಡುತ್ತಾನೆ. ಯೋಬ್ರಹ್ಮಾಣಂ ವಿದಧಾತಿ ಪೂರ್ವಂ ಯೋವೈ ವೇದಾಂಶ್ಚ ಪ್ರಹಿಣೋತಿತಸ್ಮೈ । ತಂ ಹ ದೇವಮಾತ್ಮಬುದ್ಧಿಪ್ರಕಾಶಂ ಮುಮುಕ್ಷುರ್ವೈಶರಣಮಹಂ ಪ್ರಪದ್ಯೇ ॥ ಎಂದು ಶ್ರುತಿ ಇದನ್ನು ಕೊಂಡಾಡುತ್ತದೆ.

ಕಮಲಸಂಭವನನ್ನು ಸೃಷ್ಟಿಮಾಡಿದುದೇ ಅಲ್ಲದೆ ಆ ಚತುರ್ಮುಖ ಬ್ರಹ್ಮನಿಗೆ **ನಿಗಮದಾನರೂಪವಾದ ಜ್ಞಾನದಾನಮಾಡಿದ** ಕರುಣಾಕರನವನು. ಅವನು ಆದಿಗುರುವೆಂಬುದನ್ನು ಕೃಪಾಳುಗಳಾದ ಆಚಾರ್ಯರುಗಳ ಮೂಲಕ ನಾವು ತಿಳಿಯುತ್ತೇವೆ. "ಅಸಾವಸಾವಿತ್ಯಾಭಗವತ್ತಃ" ಎಂದಂತೆ ನಮ್ಮ ಗುರುಪರಂಪರೆಯ ಅನುಸಂಧಾನದಲ್ಲಿ ನಮ್ಮ ಆಚಾರ್ಯರಿಂದ ಪ್ರಾರಂಭಿಸಿ ಪರಮ ಗುರುಗಳನ್ನೆಲ್ಲಾ ನಮಿಸಿ ಭಗವಂತನವರೆಗೆ ಗುರುಪಂಕ್ತಿಯನ್ನು ಅನುಸಂಧಾನ ಮಾಡುತ್ತೇವೆ. ಹೀಗೆ ಜ್ಞಾನ ದಾನಮಾಡಿದ ಆದಿಗುರುವೂ ಅವನೇ ಆಗಿದ್ದಾನೆ. ಮೋಕ್ಷವನ್ನು ಬಯಸುವವರು ಇಂಥವನಲ್ಲಿ ಅಲ್ಲದೆ ಮತ್ತೆ ಯಾರಲ್ಲಿ ಶರಣು ಹೋಗಬಲ್ಲರು? ನಮ್ಮ ಕಣ್ಣಿನ ತಪ್ಪನ್ನು ಶಾಸ್ತ್ರವೆಂಬ ದೀಪದಿಂದ ಕಳೆದು ಹಾಕುವ ಈ ಆದಿಗುರುವನ್ನು "ಮಮಾಪ್ಯಖಿಲ ಲೋಕಾನಾಂ ಗುರುರ್ನಾರಾಯಣೋ ಗುರುಃ" "ಗುರುರಸಿ ಗತಿಶ್ಚಾಸಿ ಜಗತಾಮ್" ಎಂದೆಂದು ಕೊಂಡಾಡಿದ್ದಾರೆ. (ಶ್ಲೋಕ ೯)

ಈ ಲೋಕದಲ್ಲಿರುವ ಸಕಲ ವಿಚಿತ್ರಗಳೂ ಅವನ ಸಂಕಲ್ಪದಿಂದಾದವು.

ಇವುಗಳೆಲ್ಲದರಿಂದ ನಲಿಯುವವನೂ ಅವನೇ. ಪ್ರಕೃತಿಯು ಭೋಗ್ಯವಾಗಿರುವುದೂ, ಆತ್ಮನು ಭೋಕ್ತೃವಾಗಿರುವುದೂ ಅವನ ಸಂಕಲ್ಪದಿಂದಲೇ. ಅವನಿಗೆ ಚೇತನವರ್ಗವೂ, ಅಚೇತನವರ್ಗವೂ ಸಮಾನವಾಗಿ ಭೋಗ್ಯವಾಗಿವೆ.

ಅಚಿದ್ವರ್ಗದ ಪರಿಣಾಮಗಳು ಹೇಗೋ ಹಾಗೆಯೇ ಚೇತನ ವರ್ಗಕ್ಕೆ ಅವನು ಕೊಡುವ ಪುರುಷಾರ್ಥಗಳೂ ಸರ್ವಶೇಷಿಯಾದ ಅವನಿಗೇ ಸಂತಸವನ್ನುಂಟು ಮಾಡುವ ಕಾರಣ ಅವನು ಪ್ರಧಾನ ಫಲಿಯಾಗಿದ್ದಾನೆ 'ಪಾಂಚಾಲಿಕಾಶುಕ ವಿಭೂಷಣ ಭೋಗದಾಯೀ ಸಾಮ್ರಾಡಿವ' (ಶ್ಲೋಕ ೧೧) ಎಂದು ಆಚಾರ್ಯರು ಇದನ್ನು ನಿರೂಪಿಸಿದ್ದಾರೆ. ಅಚೇತನವಾದ ವಿಗ್ರಹವನ್ನು ಅಳಿಸಿ ಮತ್ತೆ ರೂಪಿಸುವುದು, ಅವುಗಳಿಗೆ ಒಡವೆಯೇ ಮೊದಲಾದುವುಗಳನ್ನಿಟ್ಟು ಅವುಗಳ ಚೆಲುವನ್ನು ಕಂಡು ಸಂತೋಷಿಸುವುದೂ ಲೋಕದಲ್ಲಿ ಪ್ರಸಿದ್ಧವಾಗಿದೆ. ಹಾಗೆಯೇ ಚೇತನ ವರ್ಗಕ್ಕೆ ಸೇರಿದ ಗಿಳಿಯನ್ನು ಪಂಜರದಲ್ಲಿಡುವುದು, ಹಾಲು ಹಣ್ಣು ಕೊಟ್ಟು ಪೋಷಿಸುವುದು, ಬೇಕಾದಂತೆ ಹಾರಾಟವಾಡಿಸುವುದು, ಅದರ ಸಂತೋಷವನ್ನು ಕಂಡು ನಲಿಯುವುದು, ಇವೆಲ್ಲವೂ ಸಹ ವ್ಯವಹಾರದಲ್ಲಿದೆ. ರಾಜಾಧಿರಾಜನು ತನ್ನ ಮಹಿಷಿಯೊಡನೆ ಇಂಥ ಕ್ರೀಡೆಗಳಿಂದ ಸಂತೋಷಪಡುವಂತೆ ಜಗನ್ಮಾತಾಪಿತೃಗಳಾದ ಲಕ್ಷ್ಮೀನಾರಾಯಣರು ಅಚೇತನಗಳ ಪರಿಣಾಮಗಳಿಂದಲೂ, ಚೇತನವರ್ಗಕ್ಕವರು ಕೊಟ್ಟಿರುವ ಭೋಗಾದಿಗಳಿಂದಲೂ ತಾವು ಲೀಲಾರಸವನ್ನನುಭವಿಸುತ್ತಾರೆ. ಆದ್ದರಿಂದ ನಾವು ನಮ್ಮದು ಎಂಬುದು ಬೇರೆಯಿಲ್ಲ; ಎಲ್ಲವೂ ಅವನದೇ. ಇವುಗಳೆಲ್ಲದರ ರಕ್ಷಣೆಯೂ ಅವನದೇ. ನಮ್ಮ ರಕ್ಷಣೆಯ ಫಲವೂ ಅವನದೇ ಎಂಬ ದೃಢವಿಶ್ವಾಸದಿಂದ ಅವನಲ್ಲಿ ಮರೆಹೋಗಬೇಕು.

ಭಗವಂತನು ನಮಗೆ ಭೋಗಾನುಭವವನ್ನು ಕೊಟ್ಟಿರುವಂತೆ ಮುಕ್ತಿಯನ್ನೂ ಕೊಡುವವನಾಗಿದ್ದಾನೆ. ಅವನು ವಾತ್ಸಲ್ಯಾದಿಗುಣಯುಕ್ತನಾಗಿ ತಾಯಿಗೆ ಸಮನಾಗಿದ್ದಾನೆ; ರಕ್ಷಕತ್ವವೇ ಮೊದಲಾದ ಗುಣಗಳ ಕಾರಣ ತಂದೆಯೂ ಆಗಿದ್ದಾನೆ. ಸರ್ವಾಶ್ರಯನೂ ಅವನೇ ಆಗಿದ್ದಾನೆ. ಮಂಗಳಕರವಾದುದನ್ನು ಹಾರೈಸುವ ಹೃದಯವುಳ್ಳ ಹಿತೈಷಿಯೂ ಅವನೇ. ಅವನು ಇಂಥ ಸರ್ವವಿಧ ಬಂಧುವಾದುದರಿಂದಲೇ ನಮಗೆ ಏಕೈಕಗತಿಯಾಗಿದ್ದಾನೆ. ಅವನನ್ನೇ

ಪಡೆದುಕೊಳ್ಳಲು ಸಾಧನವೂ ಅವನೇ ಆಗಿದ್ದಾನೆ. ಆತನಲ್ಲಿ ಶರಣಾದವರು ಅವನ ದಿವ್ಯಧಾಮವನ್ನು ಸೇರಿ ಆತನ ನಿತ್ಯಕೈಂಕರ್ಯದ ಮಹದಾನಂದವನ್ನು ಪಡೆದುಕೊಂಡುಬಿಡುವರು. (ಶ್ಲೋಕ ೧೨)

ಇಂಥ ಪರಮ ಕರುಣಾಳು ಮತ್ತೆ ಯಾರುಂಟು ? ಇವನನ್ನಲ್ಲದೆ ಮತ್ತೆ ಯಾರಲ್ಲಿ ತಾನೇ ಆಶ್ರಯವನ್ನು ಬೇಡಬಹುದು ?

" ಕರ್ಮಣಾಂ ಪರಿಪಾಕತ್ವಾತ್ ಆವಿರಿಂಚಾದಮಂಗಲಮ್ ।
ಇತಿಮತ್ವಾ ವಿರಕ್ತಸ್ಯ ವಾಸುದೇವಃ ಪರಾಗತಿಃ ॥ "

ಎಂಬುದು ಸರ್ವರಿಗೂ ಶ್ರೀಮನ್ನಾರಾಯಣನೇ ಗತಿ ಎಂಬುದನ್ನು ತೋರಿಸುತ್ತಿದೆ.

ಜಾಯಮಾನಂ ತು ಪುರುಷಂ ಯಂ ಪಶ್ಯೇನ್ಮಧುಸೂಧನಃ ।
ಸಾತ್ವಿಕಸ್ಸತು ವಿಜ್ಞೇಯಃ ಸವೈಮೋಕ್ಷಾರ್ಥ ಚಿಂತಕಃ ॥

ಎಂಬಂತೆ ಭಾಗ್ಯವಿಶೇಷವುಳ್ಳವರು ಹುಟ್ಟುವ ಕಾಲದಲ್ಲಿ ರಜಸ್ತಮಸ್ಸುಗಳ ನಾಶಕ್ಕೆ ಕಾರಣವಾದ ಮಧುಸೂಧನನ ಕಟಾಕ್ಷಕ್ಕೆ ಪಾತ್ರರಾಗಿ ಮುಮುಕ್ಷುಗಳಾಗುವರು. ಭಗವಂತನ ಕಟಾಕ್ಷದ ಪ್ರಭಾವ ಇಂಥದು. (ಶ್ಲೋಕ ೧೩)

ಭಗವಂತನು ಪ್ರಧಾನಫಲಿಯೆಂದು ಮೇಲೆ ಹೇಳಲಾಯಿತು. ನಮ್ಮನ್ನು ಕಾರ್ಯಗಳಲ್ಲಿ ಪ್ರೇರಿಸುವವನೂ ಅವನೇ ಎಂದು ಹೇಳಿದೆ. ಹೀಗೆ ಪರಮ ಕರ್ತೃತ್ವವೂ, ಭೋಕ್ತೃತ್ವವೂ ಅವನದೇ ಆದರೆ ನಮ್ಮ ಪಾತ್ರವೇನು ? ನಮಗೆ ಕರ್ತೃತ್ವವುಂಟೇ ? ಕರ್ತೃತ್ವವಿಲ್ಲದಿದ್ದಾಗ ಪಾಪಪುಣ್ಯಗಳುಂಟೇ ಎಂಬ ಸಂದೇಹ ತಲೆದೋರುತ್ತದೆ. ಭಗವಂತನಿಂದ ನಮಗೆ ಕರ್ತೃತ್ವವು ಕೊಡಲ್ಪಟ್ಟಿದೆಯೆಂದೂ, ಅವನಿಗಧೀನವಾದ ಕರ್ತೃತ್ವವು ನಮಗೆ ಉಂಟೆಂದೂ " ಕರ್ತಾ ಶಾಸ್ತ್ರಾರ್ಥವತ್ವಾತ್ " " ಪರಾತ್ತುತಚ್ಛ್ರುತೇಃ " ಎಂಬ ಸೂತ್ರಗಳು ತಿಳಿಸುತ್ತಿವೆ. ಭಗವಂತನು ನಮಗೆ ಕರಣಕಳೇಬರಾದಿಗಳನ್ನು ಅನುಗ್ರಹಿಸಿ ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ ಮುಂತಾದುವನ್ನಿತ್ತು ನಮಗೆ ಸಹಾಯಕನಾಗಿ ನಿಲ್ಲುತ್ತಾನೆ. ಶಾಸ್ತ್ರವೆಂಬ ಸ್ಥಿರಪ್ರದೀಪವನ್ನು ಕೊಟ್ಟು ಒಳಿತು ಕೆಡಕುಗಳನ್ನು

ತೋರಿಸುತ್ತಾನೆ. "ಏಷಪಂಥಾಃ ವಿದರ್ಭಾಣಾಂ ಏಷ ಗಚ್ಛತಿ ಕೋಸಲಃ" ಎಂದು ನಳನು ದಮಯಂತಿಗೆ ತಿಳಿಸಿದಂತೆ ಸಾಧುಕರ್ಮ ಮಾಡುವವರಿಗೆ ಉಂಟಾಗತಕ್ಕ ಸತ್ಫಲಗಳನ್ನೂ, ಅಸಾಧುಕರ್ಮ ಮಾಡುವವರಿಗೆ ಒದಗುವ ದುಷ್ಫಲಗಳನ್ನೂ ತಿಳಿಸುತ್ತಾನೆ. ಅವುಗಳಲ್ಲಿ ನಮಗೆ ಮನಬಂದುದನ್ನು ಆರಿಸಿ ಕೊಳ್ಳುವ ಸ್ವಾತಂತ್ರ್ಯವನ್ನು ಕೊಟ್ಟಿದ್ದಾನೆ. "ಯಥೇಚ್ಛಸಿ ತಥಾ ಕುರು" ಎಂದಲ್ಲವೇ ಅವನು ಅರ್ಜುನನಿಗೆ ಹೇಳಿದುದು ? ನಾವು ನಮ್ಮ ಸಂಸ್ಕಾರಕ್ಕನು ಗುಣವಾಗಿ ಯಾವುದನ್ನು ಆರಿಸಿಕೊಳ್ಳುತ್ತೇವೆಯೋ ಅದಕ್ಕನುಗುಣವಾದ ಫಲ ವನ್ನು ಸರ್ವಸಮನಾದ ಅವನೇ ವಿತರಣ ಮಾಡುತ್ತಾನೆ. ಹೀಗಾಗಿ ಪುಣ್ಯ ಪಾಪಕರ್ಮಗಳ ಜವಾಬ್ದಾರಿ ನಮ್ಮದೇ ಆಗುತ್ತದೆ ಜೀವರುಗಳು ಅನಾದಿ ಯಾಗಿ ಕರ್ಮವೂ ಅನಾದಿಯಾಗಿರುವುದೆಂಬುದನ್ನೇ "ನಕರ್ಮ ಅವಿಭಾಗಾದಿತಿ ಚೇನ್ನ ಅನಾದಿತ್ವಾದುಪಪದ್ಯತೇ ಚಾಪ್ಯುಪಲಭ್ಯತೇಚ" ಎಂದು ಸೂತ್ರಕಾರರು ಸಮರ್ಥಿಸಿದ್ದಾರೆ.

'ನ ಚಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।
ಉದಾಸೀನವದಾಸೀನಂ ಅಸಕ್ತಂ ತೇಷು ಕರ್ಮಸು ॥

ಎಂದು ಇದನ್ನು ತಾನೇ ಹೇಳಿಕೊಂಡಿದ್ದಾನೆ. ಜೀವರು ಅಸಂಖ್ಯರಾಗಿದ್ದಾರೆ. ಅವರ ಕರ್ಮಗಳೂ ಬಗೆ ಬಗೆಯಾಗಿವೆ. ಆವರೆ ಅನಂತಕೋಟಿ ಜೀವರುಗಳ ಈ ವಿಷಮವಾದ ಕರ್ಮಗಳಲ್ಲಿ ಭಗವಂತನಿಗೆ ಅನ್ವಯವಿಲ್ಲ.

'ಸಮೋಽಹಂ ಸರ್ವಭೂತೇಷು ನಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।' ಎಂದು ತಾನೇ ತಿಳಿಸಿರುವಂತೆ ಚೇತನರ ಕರ್ಮಾನುಗುಣವಾಗಿ ಫಲಪ್ರದಾನ ಮಾಡುವ ಭಗವಂತನು ಪಕ್ಷಪಾತಾದಿ ದೋಷಗಳಿಲ್ಲದವನಾಗಿದ್ದಾನೆ. ಕರ್ಮದ ಕಾರಣ ಬಗೆ ಬಗೆಯಾಗಿರುವ ಚೇತನರೆಲ್ಲರೂ ಅವನನ್ನು ಆಶ್ರಯಿಸಬೇಕಾಗಿದೆ. ಜಾತಿತಃ, ಆಕಾರತಃ, ಸ್ವಭಾವತಃ, ಜ್ಞಾನತಃ, ಅತ್ಯಂತವಾಗಿ ಉತ್ಕೃಷ್ಟಾಪ ಕೃಷ್ಟವಾದ ರೂಪದಲ್ಲಿರುವ ಸಕಲ ಭೂತಗಳೂ ಅವನನ್ನು ಆಶ್ರಯಿಸುವುದರಲ್ಲಿ ಅವನು ಸಮನಾಗಿದ್ದಾನೆ. ಸರ್ವರಿಗೂ ಸರ್ವ ವಿಧವಾದ ಬಂಧು ಅವನು. ಅವನು ಕರುಣಾಳುವಾದಲ್ಲಿ ಎಲ್ಲರ ಕಷ್ಟವನ್ನೂ ಏಕೆ ಕೂಡಲೇ ಪರಿಹಾರ ಮಾಡುವುದಿಲ್ಲವೆಂಬುದಕ್ಕೆ ಉತ್ತರವನ್ನು ಆಚಾರ್ಯರು 'ಸ್ವೇನೈವ ಕ್ಲೃಪ್ತಮುಪ

ದೇಶಮವೇಕ್ಷಮಾಣಃ' (ಶ್ಲೋಕ ೧೪) ಎಂದು ತಿಳಿಸಿರುತ್ತಾರೆ. ಅವನು ನಿರ್ದಯ ನಲ್ಲ. ಪಕ್ಷಪಾತವುಳ್ಳವನೂ ಅಲ್ಲ. ತನಗೆ ಮನ ಬಂದವರನ್ನು ಮನಬಂದಂತೆ ಉದ್ಧರಿಸಿ ಉಳಿದವರನ್ನು ಹಿಂಸಿಸುವವನೂ ಅಲ್ಲ. ಯಾರು ತನ್ನಲ್ಲಿ ಅಭಿಮುಖ್ಯ ವನ್ನು ತೋರುವರೋ ಯಾರು ರಕ್ಷಿಸೆಂದು ಅವನಲ್ಲಿ ಬೇಡುವರೋ ಅವರು ಯಾರಾದರೂ ಸರಿ ಅವರನ್ನು ರಕ್ಷಿಸುತ್ತಾನೆ. ಅದೇ ಅವನ ಸಂಕಲ್ಪ. ಚೇತನರ ರಕ್ಷಾಪೇಕ್ಷೆಯನ್ನು ಮಾತ್ರ ನಿರೀಕ್ಷಿಸುತ್ತಿರುತ್ತಾನೆ ಅವನು.

ಸರ್ವಜ್ಞೋಽಪಿಹಿ ವಿಶ್ವೇಶಃ ಸದಾ ಕಾರುಣಿಕೋಽಪಿಸನ್ |
ಸಂಸಾರ ತಂತ್ರ ವಾಹಿತ್ವಾತ್ ರಕ್ಷಾಪೇಕ್ಷಾಂ ಪ್ರತೀಕ್ಷತೇ ||'

ಎಂದು ಈ ಅಂಶವನ್ನು ವಿವರಿಸಿದೆ. 'ಸುಹೃದಂ ಸರ್ವಭೂತಾನಾಂ' ಎಂಬುದು ಅವನ ಬಿರುದು, ಆದರೆ ಆಯಾ ಚೇತನರ ಅಪೇಕ್ಷೆಗನುಗುಣವಾಗಿ ಫಲ ಪ್ರದಾನ ಮಾಡುವುದು ಅವನ ಸಂಕಲ್ಪ. ಅವನನ್ನು ಯಾರು ಏನನ್ನು ಬೇಡಿದರೂ ಅದನ್ನು ಅವನು ನೀಡುವವನಾಗಿದ್ದಾನೆ ಆದರೆ ತನ್ನ ಇಚ್ಛೆಯಂತೆ ಯಾರಿಗೂ ಏನನ್ನೂ ಬಲಾತ್ಕಾರವಾಗಿ ಕೊಡುವವನು ಅವನಲ್ಲ. ಇದರಿಂದಲೇ ಅವನು ಸರ್ವ ಸಮ ನಾಗಿದ್ದಾನೆ. ವೈಷಮ್ಯ ನೈರ್ಘೃಣ್ಯ ದೂರನಾಗಿದ್ದಾನೆ. 'ಯದಿವಾ ರಾವಣಃ ಸ್ವಯಮ್' ಎಂದು ಹೇಳಿದ ಕರುಣಾಕರನಲ್ಲವೇ ಅವನು ? ಅವನ ಈ ಸ್ವಭಾವ ವನ್ನು ತಿಳಿದ ಮೇಲೆ ಅವನಲ್ಲಿ ಮರೆ ಹೊಕ್ಕು ಅವನಿಂದ ಪರಮ ಪ್ರಯೋಜನ ವನ್ನು ಪಡೆಯದವರು ಜಾಣರಾದಾರೇ? ಅವನ ಈ ನಿರುಪಾಧಿಕವಾದ ಸುಹೃತ್ತ್ವ ವನ್ನು ಅರಿತವರು ಅವನ ಪದತಲದಲ್ಲಿ ತಮ್ಮನ್ನೂ ತಮ್ಮದನ್ನೂ ಸಮರ್ಪಣೆ ಮಾಡಿ ಧನ್ಯರಾಗಬೇಡವೇ ?

ಭಗವಂತನ ಸೌಹಾರ್ದ ಕಾರ್ಯವನ್ನು ನಾವು ಎಷ್ಟು ಬಣ್ಣಿಸಿದರೂ ಸಾಲದು. ಭಕ್ತಪರಾಧೀನನಾದವನು ಅವನು. ಅವನ ದಾಸರೇ ಆದ ನಮ್ಮನ್ನು ವಶಪಡಿಸಿಕೊಳ್ಳಲು ಬಗೆ ಬಗೆಯಾಗಿ ಯತ್ನಿಸುವವನು ಅವನು. ತಾನು ಸರ್ವ ರಕ್ಷಕನೆಂಬುದನ್ನು ಲೋಕಕ್ಕೆಲ್ಲಾ ತೋರಿಸಿ ಅವರಲ್ಲಿ ಶ್ರದ್ಧೆಯನ್ನುಂಟುಮಾಡು ವುದಕ್ಕಾಗಿ ಅವನು ವಿಭವಸ್ವರೂಪದಿಂದ ಅವತಾರ ಮಾಡುತ್ತಾನೆ. 'ಅಜಾಯ ಮಾನೋ ಬಹುಧಾ ವಿಜಾಯತೇ' ಎಂದು ಹೇಳಿದಂತೆ ಅವನು ತನ್ನ ಸಂಕಲ್ಪದ ಕಾರಣ ಅವತಾರ ಮಾಡುವವನಾಗಿದ್ದಾನೆ. ಅರ್ಜುನನಿಗೆ ತನ್ನ ಅವತಾರ

ರಹಸ್ಯವನ್ನು ಪರಮಾತ್ಮನು ಉಪದೇಶಿಸಿದನಷ್ಟೇ? ಅವತಾರಗಳು ಸತ್ಯವಾದವು. ಆ ಅವತಾರಗಳಲ್ಲಿಯೂ ಭಗವಂತನ ಶರೀರ ಅಪ್ರಾಕೃತವಾದ ದಿವ್ಯಶರೀರ. ಅವತಾರಕ್ಕೆ ಕಾರಣ ಅವನ ಸತ್ಯ ಸಂಕಲ್ಪ. ಅವತಾರ ಕಾಲವಾದರೋ ಧರ್ಮಕ್ಕೆ ಗ್ಲಾನಿಯುಂಟಾದಕಾಲ. ಅವತಾರಗಳ ಪ್ರಯೋಜನ ಸಾಧುಸಂರಕ್ಷಣೆ. ಇದು ಭಗವಂತನ ಅವತಾರ ರಹಸ್ಯ.

'ನಾಕಾರಣಾತ್ಕಾರಣಾದ್ವಾ ಕಾರಣಾಕಾರಣಾನ್ನಚ |
ಶರೀರ ಗ್ರಹಣಂ ತಸ್ಯ ಧರ್ಮತ್ರಾಣಾಯ ಕೇವಲಂ ||'

ಎಂದು ಈ ಅಂಶವನ್ನು ಸಮರ್ಥಿಸಿದ್ದಾರೆ. ಹೀಗೆ ಭಗವಂತನು ಅಚಿಂತ್ಯನೂ ಅದ್ಭುತನೂ ಆಗಿ ಬ್ರಹ್ಮಾದಿಗಳಿಗೂ ಧ್ಯಾನಾರಾಧನಗಳಿಗೆ ಅಗೋಚರನಾಗಿದ್ದರೂ ಅಪಾರವಾದ ಕಾರುಣ್ಯ ವಾತ್ಸಲ್ಯಗಳಿಂದೊಡಗೂಡಿ ಸಾಕಾರನಾಗಿಯೇ ಈ ಲೋಕದಲ್ಲಿ ಆಬಾಲ ಗೋಪೀಜನರೂ ತನ್ನನ್ನು ಆಶ್ರಯಿಸಲನುಕೂಲಿಸುವಂತೆ ಗೋಚರನಾಗಿ ತನ್ನ ಸೌಲಭ್ಯದ ಪರಾಕಾಷ್ಠೆಯನ್ನು ತೋರಿಸುತ್ತಾನೆ. ಭಗವಂತನ ದಿವ್ಯಾವತಾರಗಳ ರಹಸ್ಯವನ್ನರಿತವರು ಭಗವಂತನನ್ನೇ ಸೇರುವ ರೆಂಬುವನ್ನು

ಜನ್ಮಕರ್ಮ ಚ ಮೇದಿವ್ಯಂ ಏವಂ ಯೋವೇತ್ತಿ ತತ್ತ್ವತಃ |
ತ್ಯಕ್ತ್ವಾದೇಹಂ ಪುನರ್ಜನ್ಮ ನೈತಿ ಮಾ ಮೇತಿ ಸೋಽರ್ಜುನ ||

ಎಂದು ತಾನೇ ಉಪದೇಶಿಸಿದ್ದಾನೆ. (ಶ್ಲೋಕ ೧೭)

ಹೀಗೆ ತಾನು ಅನೇಕಶಃ ಅವತಾರ ಪರಿಗ್ರಹ ಮಾಡಿದರೂ ತನ್ನನ್ನು ಅರಿಯದ ಜನರು ಆಶ್ರಯಿಸದೆ ಹೋದುದಕ್ಕಾಗಿ ಭಗವಂತನು

'ಅವಜಾನಂತಿ ಮಾಂ ಮೂಢಾಃ ಮಾನುಷೀಂ ತನುಮಾಶ್ರಿತಮ್ |
ಪರಂಭಾವಮ ಜಾನಂತೋ ಮಮ ಭೂತ ಮಹೇಶ್ವರಮ್ ||'

ಎಂದು ವಿಷಾದಿಸಿ ಸರ್ವರೂ ಸರ್ವ ಕಾಲದಲ್ಲಿಯೂ ಆಶ್ರಯಿಸಲು ಅನುಕೂಲ ವಾಗುವಂತೆ ಅರ್ಚಾರೂಪಿಯಾಗಿ ಮೈದೋರಿದ್ದಾನೆ. ಶ್ರೀದೇವಿ ಭೂದೇವಿಯ ರಿಂದ ಸೇವಿಸಲ್ಪಡುವವನೂ, ನಿವ್ಯಾರ್ಜನಿರ್ಭರ ದಯಾಭರಿತನೂ, ವೇದಾಂತ

ವೇದ್ಯನೂ ಆದ ಪ್ರಭು ಸರ್ವ ಸುಲಭನಾಗಿ ಶ್ರೀರಂಗವೇ ಮೊದಲಾದ ಕ್ಷೇತ್ರ ಗಳಲ್ಲಿ ಅರ್ಚಾರೂಪಿಯಾಗಿ ಪ್ರಕಾಶಿಸುತ್ತಿರುವುದಂತೂ ಅವನ ಪರಮ ಸೌಲಭ್ಯಕ್ಕೆ ಸಾಕ್ಷಿಯಾಗಿದೆ. ಯಾವ ದೇವನು ಪರಂಜ್ಯೋತಿ ಸ್ವರೂಪನಾಗಿ ದ್ದಾನೋ, ಯಾರನ್ನು ಶ್ರುತಿಯು 'ತಸ್ಯಭಾಸಾ ಸರ್ವಮಿದಂ ವಿಭಾತಿ' ಎಂದೂ 'ಯದತಃ ಪರೋ ದಿವೋ ಜ್ಯೋತಿಃ ದೀಪ್ಯತೇ ವಿಶ್ವತಃ ಪೃಷ್ಠೇಷು' ಎಂದೂ ಸ್ತುತಿಸುತ್ತಾ ನಿರತಿಶಯ ದೀಪ್ತಿಯುಕ್ತ ಜ್ಯೋತಿಸ್ಸೆಂದು ಕೊಂಡಾಡುತ್ತದೆಯೋ ಅಂಥ ದಿವ್ಯತೇಜೋಮಯನು ತನ್ನ ತೇಜಸ್ಸನ್ನು ಕಡಿಮೆಮಾಡಿ ಕೊಂಡು ದೀಪಪ್ರಕಾಶನಾಗಿ ವಿರಾಜಿಸುತ್ತಿರುವುದು ಮಹದಾಶ್ಚರ್ಯವೇ ಸರಿ! ಅಜ್ಞರೂ, ಅಶಕ್ತರೂ ಆದ ನಾವೂ ಅವನನ್ನು ಸಂದರ್ಶಿಸಲಾಗುವಂತೆ ಆ ಪರಮ ಕರುಣಾಳು ಈ ರೂಪದಲ್ಲಿ ಮೈದೋರಿದ್ದಾನೆ. ಭಗವಂತನ ವಿಶ್ವರೂಪವನ್ನು ಕಾಣಲು ಬಯಸಿದ ಅರ್ಜುನ ಅವನನ್ನು ಬೇಡಿದಾಗ ಆ ಪರಮ ಕರುಣಾಳು ತನ್ನ ದಿವ್ಯಾದ್ಭುತ ರೂಪವನ್ನು ತೋರಿದುದಲ್ಲದೆ ಅದನ್ನು ಕಾಣುವ ದಿವ್ಯ ದೃಷ್ಟಿ ಯನ್ನೂ ಸಹ 'ದಿವ್ಯಂದದಾಮಿತೇ ಚಕ್ಷುಃ ಪಶ್ಯಮೇ ಯೋಗಮೈಶ್ವರಮ್ |' ಎಂದು ಕರುಣಿಸಿದನು. ಭಗವಂತನ ದಿವ್ಯತೇಜೋಮಯವಾದ, ಸಹಸ್ರ ಸೂರ್ಯ ತೇಜಸ್ಸದೃಶವಾದ ರೂಪವನ್ನು ಕಂಡು ತತ್ತರಿಸಿ ಹೋದ ಅರ್ಜುನ-'ಅದೃಷ್ಟ ಪೂರ್ವಂ ಹೃಷಿತೋಽಸ್ಮಿದೃಷ್ಟ್ವಾ ಭಯೇನ ಚ ಪ್ರವ್ಯಥಿತಂ ಮನೋಮೇ ತದೇವಮೇ ದರ್ಶಯ ದೇವ ರೂಪಂ ಪ್ರಸೀದ ದೇವೇಶ ಜಗನ್ನಿವಾಸ ||' ಎಂದು ಬೇಡಿದಾಗ ಆ ರೂಪವನ್ನು ಮರೆಸಿ ತನ್ನ ಸೌಮ್ಯವಾದ ರೂಪವನ್ನು ಪ್ರದರ್ಶಿಸಿದ ನಷ್ಟೇ? ದೇವಕೀ ದೇವಿಗೆ ಭಗವಾನ್ ಕೃಷ್ಣನು ಚತುರ್ಭುಜನಾಗಿ ಶಂಖ ಚಕ್ರ ಗದಾಪದ್ಮಾದಿಗಳಿಂದೊಡಗೂಡಿ ಅವತರಿಸಿದನು. ಕಂಸನ ಕಾರಣ ಉದ್ವೇಗ ಗೊಂಡ ಮಾತೆ 'ಉಪಸಂಹರ ವಿಶ್ವಾತ್ಮನ್ನದೋ ರೂಪಮಲೌಕಿಕಮ್ | ಶಂಖ ಚಕ್ರಗದಾಪದ್ಮ ಶ್ರಿಯಾಜುಷ್ಟಂ ಚತುರ್ಭುಜಮ್ ||' ಎಂದು ಆಗ ಬೇಡಿದಳು. ಆಗ ಸೌಲಭ್ಯ ಪೂರ್ಣನಾದ ದೇವನು ಪ್ರಾಕೃತ ಶಿಶುವಿನ ರೂಪನ್ನೇಹೊಂದಿದನು. ಭಕ್ತರು ತನ್ನನ್ನು ಸೇವಿಸಲನುಕೂಲವಾಗಲೆಂದು ಆ ಪರಮ ದಯಾಶಾಲಿಯು ತನ್ನ ದಿವ್ಯ ತೇಜಸ್ಸನ್ನು ಮರೆಸಿಕೊಂಡು ನಮಗೆ ಗೋಚರಿಸುತ್ತಾನೆ. ವೇದಾಂತ ವೇದ್ಯನೂ, ಸರ್ವಸ್ಮಾತ್ಪರನೂ, ಸರ್ವಾಧಿಕನೂ ಸರ್ವಸ್ವಾಮಿಯೂ ಆದ ದೇವ ದೇವನು ಶ್ರೀಮತ್ಕಾಂಚೀಪುರಿಯಲ್ಲಿನ ವೇಗವತೀ ನದಿಯ ತೀರದಲ್ಲಿ ಅರ್ಚಾ

ರೂಪಿಯಾಗಿ ಮೈದೋರಿರುವುದೂ ಅವನ ಸೌಲಭ್ಯದ ಕಾರ್ಯವೇ ಸರಿ. (ಶ್ಲೋಕ ೨).

ಸರ್ವರ ದೃಷ್ಟಿ ಚಿತ್ತಾಪಹಾರಕನಾದ ಲೋಕನಾಥನು ತನ್ನ ಪರತ್ವವನ್ನು ಮರೆಸಿ ಸೌಲಭ್ಯವನ್ನು ಪ್ರದರ್ಶಿಸಿ ಜನರೆಲ್ಲರ ಮನಸ್ಸನ್ನು ಸೂರೆಗೊಳ್ಳಲು ಹೀಗೆ ಸಂದರ್ಶನ ನೀಡುತ್ತಿದ್ದಾನೆ. ಇಲ್ಲದಿದ್ದರೆ ಅಂಥ ಪರಾತ್ಪರವಸ್ತು ನಮಗೆ ಗೋಚರಿಸುವುದೆಂದರೇನು ? ತನ್ನ ದಿವ್ಯ ರೂಪವನ್ನು ನಮಗೆ ತೋರುವುದೆಂದ ರೇನು ? ತಿಳಿದೋ ತಿಳಿಯದೆಯೋ ನಾವು ಉಚ್ಚರಿಸುವ ಶರಣೋಕ್ತಿಗೇ ನಮಗೆ ವಶ್ಯನಾಗುವುದೆಂದರೇನು? ಭಗವಂತನನ್ನು 'ಚಾರುದರ್ಶೀ' ಎಂದು ಆಚಾರ್ಯರು ಹೇಳುತ್ತಾ ಅವನ ವಾತ್ಸಲ್ಯವನ್ನು ಕೊಂಡಾಡಿದ್ದಾರೆ. ' ಕಥಂಚಿದು ಪಕಾರೇಣ ಕೃತೇನೈಕೇನ ತುಷ್ಯತಿ | ನಸ್ಮರತ್ಯಪ ಕಾರಾಣಾಂ ಶತಮಪ್ಯಾತ್ಮವತ್ತಯಾ || ' ಎಂಬ ಕೊಂಡಾಡಿಕೆಗೆ ಪಾತ್ರನಾದವನು ಅವನೊಬ್ಬನೇ.

ವೇದ ಮಾರ್ಗದಲ್ಲಿ ಪ್ರಯಾಣ ಮಾಡಲು ಶಕ್ತರಾದವರೂ ಆದರೆ ಮಾರ್ಗ ಮಧ್ಯದಲ್ಲಿ ನಿದ್ದೆ ಹೋದವರೂ ಆದವರನ್ನು ಅವನು ಎಚ್ಚರಿಸಿ ಅವರ ಗುರಿ ಯೆಡೆಗೆ ಕರುಣೆಯಿಂದ ಕರೆದೊಯ್ಯುವನು ' ಎಂದು ಹೇಳುತ್ತಾ (ಶ್ಲೋಕ ೧೫) ಭಗವಂತನ ಸೌಹಾರ್ದ ಕಾರ್ಯವನ್ನು ಆಚಾರ್ಯರು ಬಣ್ಣಿಸಿದ್ದಾರೆ. ಲೋಕ ದಲ್ಲಿ ಎರಡು ಬಗೆಯ ಜನರಿದ್ದಾರೆ. ಕೆಲವರು ಸಾಧನಾನುಷ್ಠಾನಗಳನ್ನು ಮಾಡುವ ಸಾಮರ್ಥ್ಯವನ್ನು ಹೊಂದಿರುತ್ತಾರೆ. ಇವರು ಸಾಧನೆಯ ಮಾರ್ಗದಲ್ಲಿ ನಡೆಯಲು ತೊಡಗಿರುತ್ತಾರೆ. ಸಾಧನೆಯನ್ನಾರಂಭಿಸಿದುದೇ ಒಂದು ದೊಡ್ಡ ಗುಣ ಇವರದು. ಆದರೆ ಮಾರ್ಗ ಮಧ್ಯದಲ್ಲಿ ನಿದ್ರೆ ಹೋಗಿ ಬಿಡುವರವರು. ಅಂಥವರನ್ನು ಎಚ್ಚರಿಸಿ ಅವರ ಗುರಿಯನ್ನು ಸ್ಮರಣೆಗೆ ತಂದು ಕೊಟ್ಟು ಮುಂದೆ ಮಾರ್ಗಾತ್ರಿಕಮಣ ಮಾಡಲು ಪ್ರೋತ್ಸಾಹಿಸಿ ' ನಹಿಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ ' ಎಂಬಂತೆ ಆಶ್ವಾಸನೆಯಿತ್ತು ಅವರು ಪ್ರಾಪ್ಯವನ್ನು ಹೊಂದುವಂತೆ ಭಗವಂತನು ಶ್ರಮಿಸುತ್ತಾನೆ ಭಗವಂತ ಇವರಿಗೆ ಪ್ರಾಪಕ ನಾಗುತ್ತಾನೆ. ಇವರು ಪ್ರಸ್ಥಾನ ಶಕ್ತಿಸಹಿತರು. ಆದ್ದರಿಂದ ಬೋಧನ ಮಾತ್ರವೇ ಇವರಿಗೆ ಸಾಕು. ಮುಂದೆ ಗುರಿಯನ್ನು ಮುಟ್ಟಲು ಯತ್ನಿಸುವರವರು. ಇವರ ಮತ್ತೊಂದು ಬಗೆಯ ಜನ ಇವರಿಗಿಂತ ವಿಲಕ್ಷಣರಾಗಿದ್ದಾರೆ ಅವರಿಗೆ

ಗಮನ ಶಕ್ತಿಯೇ ಇಲ್ಲ. ಅವರು ' ಪ್ರಸ್ಥಾನಶಕ್ತಿ ರಹಿತರು. ಅತಿ ವೃದ್ಧರಾದವರು, ಎಳೆಯ ಶಿಶುಗಳು, ಜಡರು, ಅಂಥವರು ಆದವರನ್ನು ಮತ್ತೊಬ್ಬರು ಎತ್ತಿಕೊಂಡು ಹೋಗಬೇಕಷ್ಟೆ ? ಹಾಗೆ ಅತ್ಯಂತವಾಗಿ ಅಶಕ್ತರಾದ ಅವರನ್ನು ಅವನೇ ತನ್ನೆಡೆಗೆ ಎತ್ತಿಕೊಂಡು ಹೋಗುವನು. ಕೇವಲ ಬೋಧನ ಅವರಿಗೆ ಸಾಲದು. ನಾವು ಅಂಥವರು. ಗಮನ ಶಕ್ತಿಯಿಲ್ಲದ ಕಾರಣ ಅತ್ಯಂತ ಪರತಂತ್ರರು ನಾವು. ನಮ್ಮಂಥ ಅಶಕ್ತರನ್ನು ಅವನೇ ತೆಗೆದುಕೊಂಡು ಹೋಗುವವನಾಗಿದ್ದಾನೆ. ಇದು ಅವನ ದಯಾಕಾರ್ಯದ ಪರಾಕಾಷ್ಠೆ. ಹೀಗೆ ಅವನೇ ನಮಗೆ ಉಪಾಯನಾಗಬೇಕಾದರೆ ನಾವು ಅವನಲ್ಲಿ ಅನನ್ಯಭಾವದಿಂದ ಮರೆಹೊಗಬೇಕು (ಶ್ಲೋ. ೧೫)

ಭಗವಂತನೇ ನಮಗೆ ಪ್ರಾಪ್ಯನೂ, ಪ್ರಾಪಕನೂ ಆಗಿದ್ದಾನೆಂಬುದನ್ನು ' ಯಮೇವೈಷ ವೃಣುತೇ ತೇನ ಲಭ್ಯಃ ತಸ್ಯೈಷ ಆತ್ಮಾವಿವೃಣುತೇ ತನೂಂ ಸ್ವಾಂ ' ಎಂದು ಶ್ರುತಿ ಸಾರುತ್ತದೆ. " ವರಣೀಯಶ್ಚ ಪ್ರಿಯತಮಃ । ಯಸ್ಯ ಭಗವತಿ ಅನವಧಿಕಾತಿಶಯಾ ಪ್ರೀತಿಃ ಜಾಯತೇ ಸ ಏವ ಭಗವತಃ ಪ್ರಿಯತಮಃ । ' ಎಂದು ಭಾಷ್ಯಕಾರರು ಈ ಅಂಶವನ್ನು ವಿವರಿಸಿದ್ದಾರೆ. ಯಾರು ಭಗವಂತನನ್ನು ಪ್ರೀತಿಸುವರೋ ಅವರನ್ನು ಭಗವಂತನೂ ಪ್ರೀತಿಸುತ್ತಾನೆ. ಹೀಗೆ ಪ್ರಸನ್ನನಾದ ಭಗವಂತನು ಅವರು ಯಾವುದಾದರೊಂದು ಉಪಾಯವನ್ನಾಶ್ರಯಿಸುವಂತೆ ಮಾಡಿ ಅವರ ಸಾಧನೆಯನ್ನು ಪೂರ್ಣಮಾಡುತ್ತಾನೆ. ಹೀಗಾಗಿ ಭಕ್ತಿಪ್ರಪತ್ತಿಗಳನ್ನನುಷ್ಠಿಸುವಂತೆ ಪ್ರೇರಿಸುವವನೂ ಅವನೇ ಆಗುತ್ತಾನೆ ಭಕ್ತಿಯೋಗವನ್ನಾರಿಸಿಕೊಂಡವನಿಗೆ ಕರ್ಮಯೋಗ ಮೊದಲಾಗಿ ಉಪಾಸನ ಪೂರ್ತಿ ಪರ್ಯಂತವಾಗಿ ನಡುವೆ ಬರುವ ಕರ್ತವ್ಯಗಳಲ್ಲಿ ಅಶಕ್ಯವಾದ ಅವಸ್ಥೆಗಳಲ್ಲಿ ಕರುಣಾಳುವಾದ ಭಗವಂತನು ಅನುಗ್ರಹಮಾಡಿ ಪಾಪನಿವೃತ್ತಿಯನ್ನೂ, ಸತ್ತ್ವೋನ್ಮೇಷವನ್ನೂ ಉಂಟುಮಾಡಿ ಉಪಾಸನೆಯೆಂಬ ಆ ಉಪಾಯವನ್ನು ಫಲಪರ್ಯಂತ ಪೂರ್ಣಮಾಡಿಕೊಡುತ್ತಾನೆ. ಹೀಗೆ ಅವನಿಗೆ ಉಪಾಯತ್ವವಿದೆ. ಮೋಕ್ಷಕ್ಕಾಗಿ ಶರಣಾಗತಿಯನ್ನನುಷ್ಠಿಸುವವನಿಗೆ ಉಪಾಸನೆಯೇ ಮೊದಲಾದ ಉಪಾಯಾಂತರ ಸ್ಥಾನದಲ್ಲಿಯೂ ಭಗವಂತನೇ ನಿಂತು ಫಲಪರ್ಯಂತವಾಗಿ ನಿರ್ವಹಿಸುತ್ತಾನೆ. ಇವುಗಳನ್ನುಳಿದು ನಮಗೆ ಬೇರೆ ಮಾರ್ಗವಿಲ್ಲವೆಂಬುದನ್ನು

" ಭಕ್ತ್ಯಾ ಪರಮಯಾ ವಾಪಿ ಪ್ರಪತ್ತ್ಯಾ ವಾ ಮಹಾಮುನೇ |
ಪ್ರಾಪ್ಯೋಽಹಂ ನಾನ್ಯಥಾ ಪ್ರಾಪ್ಯಃ ಮಮ ಕೈಂಕರ್ಯಲಿಪ್ಸುಭಿಃ || "

ಎಂಬ ನುಡಿ ಇದನ್ನು ಸಮರ್ಥಿಸುತ್ತದೆ. ಹೀಗೆ ಕರುಣಾಳುವಾದ ದೇವನು ಭಕ್ತಿಯನ್ನೋ, ಪ್ರಪತ್ತಿಯನ್ನೋ ಅನುಷ್ಠಿಸುವಂತೆ ಮಾಡಿ ಅತ್ಯಾಶ್ಚರ್ಯಕರವಾದ ರೀತಿಯಲ್ಲಿ ಚೇತನರ ಉದ್ಧಾರ ಮಾಡುವವನಾಗಿದ್ದಾನೆ. (ಶ್ಲೋಕ ೧೬)

ತಾನು ಅವತಾರಾದಿಗಳನ್ನು ಮಾಡಿ ಚೇತನರನ್ನು ರಕ್ಷಿಸಲು ಪ್ರಯತ್ನಿಸುವುದು ಮಾತ್ರವಲ್ಲದೆ ಗುರುವಿನ ರೂಪದಲ್ಲಿಯೂ ನಿಂತು ರಕ್ಷಣೆ ಮಾಡುವನೆಂಬುದನ್ನು 'ಸಂಪ್ರಾಪ್ತ ಸದ್ಗುರುತನೋಃ ಸಮಯೇ ದಯಾಳೋಃ ಆತ್ಮಾವಧಿರ್ಭವತಿ ಸಂಸ್ಕೃತಧೀಃ ಕ್ಷಣಂತೇ |' ಎಂದು ಆಚಾರ್ಯರು ಅನುಭವಿಸಿದ್ದಾರೆ. (ಶ್ಲೋಕ ೨೦)

ಚೇತನನೊಬ್ಬನು ಮುಕ್ತಿ ಪಡೆಯಲು ಆಚಾರ್ಯ ಸಮಾಶ್ರಯಣ ಮುಖ್ಯವಾದ ಕಾರಣ. " ಪಾಪಿಷ್ಠಃ ಕ್ಷತ್ರಬಂಧುಶ್ಚ ಪುಂಡರೀಕಶ್ಚ ಪುಣ್ಯಕೃತ್ | ಆಚಾರ್ಯವತ್ತಯಾ ಮುಕ್ತೌ ತಸ್ಮಾದಾಚಾರ್ಯವಾನ್ಭವೇತ್ ||" ಎಂದು ಆಚಾರ್ಯರ ಮಹಿಮೆಯನ್ನು ಕೊಂಡಾಡಿದ್ದಾರೆ. ಭಗವಂತನಿಂದ ಆಗದ ಚೇತನೋದ್ಧಾರ ಕಾರ್ಯ ಆಚಾರ್ಯ ಮುಖೇನ ಆಗುತ್ತದೆ. ಗೋವಿಂದನಲ್ಲಿ ಪರಾಙ್ಮುಖಚಿತ್ತರಾದ ಚೇತನರಲ್ಲಿ ಶಾಸ್ತ್ರೋಪದೇಶದ ಮೂಲಕ ವಿವೇಕವನ್ನುಂಟು ಮಾಡುವವರು ಆಚಾರ್ಯರುಗಳು. ಇದೂ ಭಗವಂತನ ರಕ್ಷಣಾ ಪ್ರಕಾರವೇ ಆಗಿದೆ.

ಫಲಪ್ರದಾನ ಮಾಡುವವನೂ ಭಗವಂತನೇ ಆಗಿದ್ದಾನೆ ಎಂಬುದನ್ನು " ಸೂತೇ ಫಲಾನ್ಯಭಿಮತಾನಿ ಭವಾನ್ ಪ್ರಸನ್ನಃ " ಎಂದು (೨೪) ತಿಳಿಸಿ ವಿಚಕ್ಷಣನಾದವನು ದುಷ್ಕರವಾದ ಉಪಾಯಗಣಗಳನ್ನು ಬಿಟ್ಟುಕೊಟ್ಟು ಅದರ ಸ್ಥಾನದಲ್ಲಿ ಸರ್ವಜ್ಞನೂ, ಸರ್ವಶಕ್ತನೂ ಆದ ಭಗವಂತನನ್ನೇ ಇಟ್ಟುಕೊಳ್ಳುತ್ತಾನೆ (ಶ್ಲೋಕ ೨೫) ಎಂದು ಉಪದೇಶಿಸಿದ್ದಾರೆ ಆಚಾರ್ಯರು. ಭಗವಂತನಲ್ಲಿ ಶರಣುಹೋಗುವುದೇ ನಮಗೆ ಮಾರ್ಗ. ಇದು ಮುಕ್ತಿ ಘಂಟಾಪಥ. ಮೋಕ್ಷಕ್ಕೆ ಹೆದ್ದಾರಿ. " ತ್ವಮೇವೋಪಾಯ ಭೂತೋ ಮೇ ಭವೇತಿ ಪ್ರಾರ್ಥನಾಮತಿಃ |

ಶರಣಾಗತಿರಿತ್ಯುಕ್ತಾ ಸಾ ದೇವೇಸ್ಮಿನ್ ಪ್ರಯುಜ್ಯತಾಮ್ ॥ " ಎಂದು ಹೇಳಿರುವಂತೆ ಸರ್ವಜ್ಞನೂ, ಸರ್ವಶಕ್ತನೂ ಸಹಜಾಸುಹೃತ್ತಾದವನೂ ಆದ ದೇವನನ್ನು ನಾವು ಮರೆಹೊಕ್ಕರೆ ನಮ್ಮ ಇಷ್ಟಾರ್ಥಗಳು ಕೈಗೂಡಿದಂತೆಯೇ.

ಹೀಗೆ ಶ್ರೀಮದಾಚಾರ್ಯರು ಈ ಸ್ತೋತ್ರದಲ್ಲಿ ಶರಣಾಗತಿಯನ್ನು ಯಾರಲ್ಲಿ ಮಾಡಬೇಕೆಂಬುದನ್ನು ಮೊದಲು (೨೬ ಶ್ಲೋಕಗಳಿಂದ) ನಿರೂಪಿಸಿ ಅನಂತರ ಸಾಧ್ಯೋಪಾಯಸ್ವರೂಪದ ನಿರೂಪಣೆ ಮಾಡಿದ್ದಾರೆ.

*　　*　　*　　*

ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಭಗವಂತನೇ ಪ್ರಧಾನವಾಗಿ ಮೋಕ್ಷೋಪಾಯನಾಗಿದ್ದಾನೆ. ಮೋಕ್ಷೋಪಾಯವನ್ನು ಸಿದ್ಧೋಪಾಯ ಮತ್ತು ಸಾಧ್ಯೋಪಾಯ ಎಂದು ಎರಡು ವಿಭಾಗ ಮಾಡಿದೆ. ಭಗವಂತನು ಸಿದ್ಧೋಪಾಯನು. ಪಕ್ಷಪಾತಾದಿಗಳಿಲ್ಲದವನೂ ಸರ್ವಸಮನೂ ಆದ ಈಶ್ವರನು ತಾನು ಸರ್ವಸ್ವತಂತ್ರನಾದರೂ ತನಗೆ ವೈಷಮ್ಯ ನೈರ್ಘೃಣ್ಯಗಳುಂಟಾಗದಿರುವುದಕ್ಕಾಗಿ ನಮ್ಮಿಂದ ಒಂದು ಸಾಧ್ಯೋಪಾಯವನ್ನು ಅನುಷ್ಠಿಸುವಂತೆ ಮಾಡಿಸಿ ಅದನ್ನೇ ವ್ಯಾಜವನ್ನಾಗಿಟ್ಟುಕೊಂಡು ನಮ್ಮನ್ನು ಸಂರಕ್ಷಿಸುತ್ತಾನೆ. ಈ ಪ್ರಭು ಕರ್ಮಾನುರೂಪವಾದ ಫಲವನ್ನು ಕೊಡುವವನಾದ ಕಾರಣ ನಾವು ಮಾಡಿದ ಯದೃಚ್ಛಾ ಸುಕೃತಾದಿಗಳಿಂದಲೇ ಇಂಥ ಒಂದು ಮೋಕ್ಷಶ್ರದ್ಧಾದಿಗಳು ನಮ್ಮಲ್ಲಿ ಉಂಟಾಗುತ್ತವೆ. ನಮ್ಮನ್ನು ಇಲ್ಲಿಂದ ಅವನು ಉದ್ಧರಿಸಲು ಅವನ ಕಾರುಣ್ಯ ಹಾಗೂ ನಮ್ಮ ಸುಕೃತ ವಿಶೇಷದಿಂದ ನಾವು ಅನುಷ್ಠಿಸುವ ಸಾಧ್ಯೋಪಾಯ ವಿಶೇಷ ಕಾರಣವಾಗುತ್ತದೆ. ಸಿದ್ಧೋಪಾಯನಾದ ಭಗವಂತನ ಪ್ರಸನ್ನತೆಯನ್ನು ಸಂಪಾದಿಸಿ ಕೊಡುವ ಉಪಾಯವೇ ಸಾಧ್ಯೋಪಾಯ. ಇದು ಭಕ್ತಿ ಮತ್ತು ಪ್ರಪತ್ತಿ ಎಂದು ಎರಡು ಬಗೆಯಾಗಿದೆ. ಇದನ್ನೇ ಆಚಾರ್ಯರು

' ಸಮಸ್ತ ಪುರುಷಾರ್ಥಾನಾಂ ಸಾಧಕಸ್ಯ ದಯಾನಿಧೇಃ ।
ಶ್ರೀಮತಃ ಪೂರ್ವ ಸಿದ್ಧತ್ವಾತ್ ಸಿದ್ಧೋಪಾಯಮಿಮಂವಿದುಃ ॥
ಭಕ್ತಿ ಪ್ರಪತ್ತಿ ಪ್ರಮುಖಂ ತದ್ವಶೀಕಾರ ಕಾರಣಮ್ ।
ತತ್ತತ್ಫಲಾರ್ಥಿಸಾಧ್ಯತ್ವಾತ್ ಸಾಧ್ಯೋಪಾಯಂ ವಿದುರ್ಬುಧಾಃ ॥ '

ಎಂದು ನಿರೂಪಿಸಿದ್ದಾರೆ. ಈ ಉಪಾಯ ಸ್ವರೂಪವನ್ನು ಶ್ರೀಮನ್ನಿಗಮಾಂತ ಮಹಾದೇಶಿಕರು ತಮ್ಮ ರಹಸ್ಯತ್ರಯ ಸಾರದಲ್ಲಿ ವಿಸ್ತಾರವಾಗಿಯೂ ಈ ಸ್ತೋತ್ರ ದಲ್ಲಿ ಸಂಗ್ರಹವಾಗಿಯೂ ನಿರೂಪಿಸಿದ್ದಾರೆ.

## ಭಕ್ತಿಯೋಗ

ಮೋಕ್ಷಕ್ಕೆ ಉಪಾಯವಾದ ಭಕ್ತಿಗೆ ಭಕ್ತಿಯೋಗ ಎಂದು ಹೆಸರು. ಭಕ್ತಿ ಯೋಗವನ್ನಾರಂಭಿಸುವುದಕ್ಕೆ ತಕ್ಕ ಅರ್ಹತೆ ಸಾಧನೆಗಳು ಬೇಕು. ಶಾಸ್ತ್ರಗಳ ಅಧ್ಯಯನದಿಂದಲೂ ಸಾಧು ಸಜ್ಜನರ ಸಹವಾಸದಿಂದಲೂ ನಮ್ಮಲ್ಲಿ ಸಾಮಾನ್ಯ ಭಕ್ತಿ ಉದಿಸುತ್ತದೆ. ಇಂಥವನು ಕರ್ಮಯೋಗ ಜ್ಞಾನ ಯೋಗಾದಿಗಳನ್ನನು ಷ್ಠಿಸಿ ಆತ್ಮಾವಲೋಕನವನ್ನು ಪಡೆದುಕೊಳ್ಳಬೇಕಾಗುತ್ತದೆ. ಆತ್ಮಯಾಥಾತ್ಮ್ಯ ಜ್ಞಾನಪೂರ್ವಕವಾಗಿಯೂ ಭಗವದಾರಾಧನರೂಪವಾಗಿಯೂ, ಭಗವತ್ಪ್ರೀತ್ಯರ್ಥ ವಾಗಿಯೂ ಫಲಾಪೇಕ್ಷೆಗಳಿಲ್ಲದೆಯೂ ನಿತ್ಯನೈಮಿತ್ತಿಕ ಕರ್ಮಾದಿಗಳೊಡನೆಯೂ ನಿಯತವಾಗಿ ಮಾಡುವ ಕರ್ಮವಿಶೇಷವೇ ಕರ್ಮಯೋಗ. ಈ ಕರ್ಮಯೋಗ ದಿಂದ ಚಿತ್ತಶುದ್ಧಿಯಾಗಿ ಇಂದ್ರಿಯ ಜಯ ಲಭಿಸುವುದು. ಇಂಥವನು ಜ್ಞಾನ ಯೋಗಕ್ಕೆ ಅಧಿಕಾರಿಯಾಗುತ್ತಾನೆ. ಪ್ರಕೃತಿಗಿಂತ ವಿಲಕ್ಷಣನಾದವನೂ, ಈಶ್ವರನಿಗೆ ಶೇಷನಾಗಿ ಶರೀರವಾಗಿರುವನೂ, ಜ್ಞಾನಸ್ವರೂಪನೂ ಆದ ಆತ್ಮನ ಸ್ವರೂಪವನ್ನು ನಿರಂತರವಾಗಿ ಚಿಂತಿಸುವುದೇ ಜ್ಞಾನಯೋಗ. ಕರ್ಮಯೋಗ ದಿಂದ ನೇರವಾಗಿಯಾಗಲೀ ಅಥವಾ ಈ ಜ್ಞಾನಯೋಗದ ಮೂಲಕವಾಗಲಿ ಆತ್ಮಾವಲೋಕನವುಂಟಾಗುವುದು. ಈ ಆತ್ಮಸಾಕ್ಷಾತ್ಕಾರ ಪರಮಾತ್ಮಾ ಸಾಕ್ಷಾತ್ಕಾರಕ್ಕೆ ಪೂರ್ವಭಾವಿಯಾದುದು. ತನ್ನ ನಿಜ ಸ್ವರೂಪನ್ನರಿತವನು ತಾನು ಹೇಗೆ ಪರಮಾತ್ಮನಿಗೇ ಶೇಷಭೂತನಾಗಿರುವನೆಂಬುದನ್ನು ಅರಿಯುವನು ಅದು ಮೊದಲ್ಗೊಂಡು ತನಗೆ ಧಾರಕನೂ, ನಿಯಾಮಕನೂ, ಶೇಷಿಯೂ ಆದ ಭಗವಂತನ ಸ್ವರೂಪಾದಿಗಳನ್ನು ಪ್ರೀತಿಯಿಂದ ನಿರಂತರವಾಗಿ ಧ್ಯಾನಿಸುವನು. ಈ ನಿರತಿಶಯ ಪ್ರೀತಿರೂಪವಾದ ಧ್ಯಾನ ವಿಶೇಷವೇ ಭಕ್ತಿಯೋಗ. ಇಲ್ಲಿಂದ ಪರಮ ಪದಕ್ಕೆ ಪ್ರಯಾಣ ಮಾಡುವ ದಿನದವರೆಗೂ ಪ್ರತಿದಿನವೂ ಮಾಡತಕ್ಕ ದಾಗಿದೆ ಇದು.

ತೈಲಧಾರೆಯಂತೆ ನಿರಂತರವಾದ ಸ್ಮೃತಿಸಂತತಿಯಾಗಿ ಸಾಕ್ಷಾತ್ಕಾರ ಸಮಾನವಾದ ವೈಶದ್ಯವನ್ನಿದು ಹೊಂದಿರುವುದು. ಈ ಭಕ್ತಿಯೋಗವನ್ನು ಕೇವಲ ಮೋಕ್ಷಪ್ರಾಪ್ತಿಗೋಸ್ಕರ ಅನುಷ್ಠಿಸುವಾಗ ಅದಕ್ಕೆ **ಪರಭಕ್ತಿ** ಎಂಬ ಹೆಸರಿದೆ. ಭಗವಂತನನ್ನರಿಯಬೇಕೆಂಬ ತೀವ್ರವಾದ ಆಸೆ ಇದು. ಈ ಪರಭಕ್ತಿ ತೀವ್ರವಾದಾಗ ಭಗವತ್ಪ್ರಸಾದದಿಂದ ಭಗವಂತನ ಪರಿಪೂರ್ಣ ಸಾಕ್ಷಾತ್ಕಾರವಾಗುವುದು. ಇದು **ಪರಜ್ಞಾನ**. ಹೀಗೆ ನಿರತಿಶಯವಾದ ಭಗವತ್ಸ್ವರೂಪವನ್ನು ಸಾಕ್ಷಾತ್ಕರಿಸಿದಾಗ ಉದ್ಭವಿಸುವ ಪ್ರೀತ್ಯತಿಶಯ **ಪರಮಭಕ್ತಿ**. ಆ ಭಗವದನುಭವ ನಿರಂತರವಾಗಿರಬೇಕೆಂಬ ಉತ್ಕಟೇಚ್ಛೆ ಇದು. ಇದರಿಂದ ಸರ್ವೇಶ್ವರನು ಪ್ರೀತನಾಗಿ ಆತನಿಗೆ ತನ್ನ ನಿತ್ಯ ಸಂಶ್ಲೇಷವನ್ನೂ ನಿತ್ಯಕೈಂಕರ್ಯವನ್ನು ದಯಪಾಲಿಸುವನು.

ಈ ಭಕ್ತಿಯೋಗದ ಅನುಷ್ಠಾನಕ್ಕೆ ಜಾತಿಗುಣಾದಿಗಳ ಅರ್ಹತೆ ಆವಶ್ಯಕ. ಜ್ಞಾನವಾಗಲೀ, ಶಕ್ತಿಯಾಗಲೀ ಅಥವಾ ಎರಡೂ ಆಗಲಿ ಕಡಿಮೆಯಾದವರಿಗೆ ಇದು ಸಾಧ್ಯವಿಲ್ಲ. ಹಾಗೆಯೇ ಕೂಡಲೇ ಫಲಪ್ರಾಪ್ತಿಯಾಗಬೇಕೆಂಬ ತೀವ್ರ ಸಂವೇಗವುಳ್ಳವರಿಗೂ ಇದು ಅನ್ವಯಿಸದು. ಇಂಥ ಕೊರತೆಗಳಿರುವವರು ತಮಗೆ ಸಾಧ್ಯವಲ್ಲದ ಭಕ್ತಿಯೋಗವನ್ನು ಬಿಟ್ಟು ಪ್ರಪತ್ತಿಯನ್ನೇ ನೇರವಾಗಿ ಮೋಕ್ಷೋಪಾಯವಾಗಿ ಅನುಷ್ಠಿಸಬಹುದು.

## ಪ್ರಪತ್ತಿ

ಭಕ್ತಿಯೋಗವನ್ನಾರಂಭಿಸುವುದಕ್ಕೆ ವಿರೋಧವಾಗಿರುವ ಪಾಪಗಳೆಲ್ಲಾ ಹೋಗಬೇಕಾದರೆ ಭಗವಂತನಲ್ಲಿ ಶರಣಾಗತಿಯನ್ನು ಮಾಡಬೇಕೆಂದು ಶಾಸ್ತ್ರಗಳು ವಿಧಿಸುತ್ತವೆ. ಶರಣಾಗತಿ ಅಥವಾ ಪ್ರಪತ್ತಿಯು ಇಲ್ಲಿ ಮೋಕ್ಷಸಾಧನಕ್ಕೆ ಅಂಗವಾಗುತ್ತದೆ. ಹೇಗೆ ಇದು ಮತ್ತೊಂದು ಸಾಧನವನ್ನು ಪೂರ್ಣಗೊಳಿಸುವುದೋ ಹಾಗೆಯೇ ನೇರವಾಗಿಯೂ, ಮೋಕ್ಷಕ್ಕೆ ಉಪಾಯವಾಗುವುದು. ಭಕ್ತಿಯನ್ನು ಸಾಧನ ಭಕ್ತಿ ಎಂದರೆ ಪ್ರಪತ್ತಿಯನ್ನು ಸಾಧ್ಯ ಭಕ್ತಿ ಎನ್ನುತ್ತಾರೆ. ಭಕ್ತಿಯೋಗದಲ್ಲಿ ಭಗವಂತನು ಪ್ರಾಪ್ಯನಾಗಿದ್ದಾನೆ; ಭಕ್ತಿಪ್ರಾಪಕವಾಗಿದೆ. ಪ್ರಪತ್ತಿಯಲ್ಲಿ ಭಗವಂತನೇ ಪ್ರಾಪ್ಯನೂ ಪ್ರಾಪಕನೂ ಆಗಿದ್ದಾನೆ ಭಕ್ತಿಯೋಗದ

ಸ್ಥಾನದಲ್ಲಿ ಭಗವಂತನನ್ನು ಆರಿಸಿಕೊಳ್ಳುವುದೇ ಪ್ರಪತ್ತಿಯಲ್ಲಿ. ಪ್ರಪತ್ತಿ ಎಂದ ರೇನು ? ಇದು ಪದ್‌ಗತೌ ಎಂಬ ಧಾತುವಿನಿಂದ ಬಂದಿದೆ. ಗತ್ಯರ್ಥಕವಾದ ಧಾತು ಜ್ಞಾನಾರ್ಥಕವೂ ಆಗುವುದರಿಂದ ಇಲ್ಲಿ ಅಪೇಕ್ಷಿತವಾದುದು ಜ್ಞಾನ ಇದು 'ಅವನು ಕಾಪಾಡುವನು' ಎಂಬ ವಿಶ್ವಾಸರೂಪವಾದುದಾಗಿದೆ. ಪ್ರಪತ್ತಿ ಎಂಬ ಶಬ್ದದಲ್ಲಿ 'ಪತ್ತಿ' ಎಂಬುವುದಕ್ಕೇ ಈ ಅರ್ಥ ಬರುವಾಗ 'ಪ್ರ' ಎಂಬ ಉಪಸರ್ಗವೂ ಸೇರಿರುವ ಕಾರಣವೇನು ಎಂದರೆ ಈ ವಿಶ್ವಾಸದ ಪ್ರಕರ್ಷತೆ ಯನ್ನದು ಸೂಚಿಸುತ್ತದೆ. ಹೀಗಾಗಿ 'ಮಹಾ ವಿಶ್ವಾಸ' ವನ್ನದು ಸೂಚಿಸುತ್ತದೆ. 'ಪ್ರಪತ್ತಿರ್ವಿಶ್ವಾಸಃ' ಎಂದೇ ಇದನ್ನು ಕರೆಯುತ್ತಾರೆ. ಶರಣಾಗತಿ ಅಥವಾ ಮರೆಹೊಗುವುದು ಎಂದೂ ಇದನ್ನು ಕರೆಯುತ್ತಾರೆ. ನ್ಯಾಸ, ನಿಕ್ಷೇಪ, ತ್ಯಾಗ ಮುಂತಾದ ಶಬ್ದಗಳಿಂದಲೂ ಇದನ್ನು ಕರೆಯುವುದುಂಟು. ಒತ್ತೆಯಿಡುವುದು. ಒಪ್ಪಿಸುವುದು. ಅರ್ಪಿಸುವುದು ಎಂಬ ಅರ್ಥ ಬರುವ ಕಾರಣ ಭಗವಂತನಲ್ಲಿ ನಮ್ಮನ್ನು ಅರ್ಪಣಮಾಡಿಕೊಳ್ಳುವುದೆಂದೂ ನಮ್ಮ ರಕ್ಷಣೆಯ ಭಾರವನ್ನು ಅವನಿಗೇ ಬಿಟ್ಟುಬಿಡುವುದೆಂದೂ ಅರ್ಥವಾಗುತ್ತದೆ. ಇದಕ್ಕೆ 'ಆತ್ಮಯಾಗ' ಎಂಬ ಹೆಸರೂ ಇದೆ. ಯಾಗವೆಂಬುದು ಇಂಥ ದೇವತೆಗೆ ಇಂಥಹವಿಸ್ಸನ್ನು ಅರ್ಪಿಸಬೇಕೆಂಬ ಬುದ್ಧಿ ವಿಶೇಷ. ಇಲ್ಲಿ 'ನಮ್ಮ ಆತ್ಮವೆಂಬುವ ಸ್ವಾದುತಮ ವಾದ ಹವಿಸ್ಸನ್ನು ಶ್ರೀಮನ್ನಾರಾಯಣನಿಗೆ ಅರ್ಪಿಸುವೆವೆಂಬ' ಬುದ್ಧಿವಿಶೇಷವೇ ಆತ್ಮಯಾಗ. ನಮ್ಮ ಇಷ್ಟಾರ್ಥಗಳನ್ನು ನಮ್ಮಿಂದಾಗಲೀ ಮತ್ತೊಬ್ಬರಿಂದಾಗಲೀ ಸಾಧಿಸಲು ನಮಗೆ ಸಾಧ್ಯವಾಗದೆ ಹೋದಾಗ ಅದರ ಪ್ರಾಪ್ತಿಗಾಗಿ ಸಮರ್ಥನೂ, ಸರ್ವಜ್ಞನೂ ಆದವನನ್ನು ಮರೆಹೊಗುವುದು ಲೋಕ ವಿದಿತವಾಗಿದೆ. 'ನಮ್ಮ ಪ್ರಯತ್ನದ ಅಪೇಕ್ಷೆಯೇ ಇಲ್ಲದೆ ಆ ಇಷ್ಟಾರ್ಥವನ್ನು ನೀನೇ ನಮಗೆ ಕೈಗೂಡಿಸಿ ಕೊಡಬೇಕೆಂದು' ಭಗವಂತನಲ್ಲಿ ಸಲ್ಲಿಸುವ ಬೇಡಿಕೆಯೇ ಶರಣಾಗತಿಯ ತಿರುಳು. ಇದನ್ನು ಆಚಾರ್ಯರು

ಅಭೀಷ್ಟೇಮಸ್ಸಾಧೇ ಸ್ವತ ಇತರತೋ ವಾ ಕ್ವಚನ ತತ್
ಭರನ್ಯಾಸಂ ಯಾಚ್ಞಾನ್ವಿತಮಭಿ ವದಂತಿ ಪ್ರಪದನಮ್ ।
ಇತಃ ಪಶ್ಚಾದ ಸ್ಮದ್ಯತನ ನಿರಪೇಕ್ಷೇಣ ಭವ ತಾ
ಸಮರ್ಥ್ಯೋಽಸಾವರ್ಥ ಸ್ತ್ವಿತಿಮತಿ ವಿಶೇಷಂ ತದವಿದುಃ ॥

ಎಂದು ಶ್ರೀಮದ್ರಹಸ್ಯತ್ರಯ ಸಾರದಲ್ಲಿ ನಿರೂಪಿಸಿದ್ದಾರೆ. ನಮ್ಮ ರಕ್ಷಣೆಯನ್ನು ನಾವು ಸಾಧಿಸಲಾರೆವೆಂದು ಮನಗಂಡಾಗ ಅದನ್ನು ಸಾಧಿಸಿ ಕೊಡಲು ಸರ್ವ ಸಮರ್ಥನಾದ ಪ್ರಭುವಿನಲ್ಲಿ–'ನೀನೇ ಅಶಕ್ತನಾದ ನನಗೆ ಉಪಾಯನಾಗಿ ಅದನ್ನು ದೊರಕಿಸಿಕೊಡಬೇಕೆಂದು' ಪ್ರಾರ್ಥಿಸಿ ನಮ್ಮನ್ನು ಅವನ ಪದತಲದಲ್ಲಿ ಕೆಡಹುವುದೇ ಶರಣಾಗತಿ. ಅತ್ಯಂತವಾದ ಪಾರತಂತ್ರ್ಯದಿಂದ ಕೂಡಿದ ಶೇಷತ್ವದ ಅನುಸಂಧಾನ ಇಲ್ಲಿದೆ. ನಾವೂ ಅವನಿಗೇ ಸೇರಿದವರೆಂದ ಮೇಲೆ ನಮ್ಮವೆಂಬುವು ದೊಂದೂ ಇಲ್ಲ. ಅವನು ತನ್ನದೇ ಆದ ವಸ್ತುವನ್ನು ತನ್ನ ಪ್ರಯೋಜನಕ್ಕಾಗಿಯೇ ಕಾಪಾಡಿಕೊಳ್ಳುವನೆಂಬ ಭಾವ ಇಲ್ಲಿದೆ. 'ನಾನು, ನನ್ನದು, ನನಗಾಗಿ' ಎಂಬ ಅಹಂಕಾರ ಮಮಕಾರಗಳನ್ನು ಕಿತ್ತೊಗೆದು 'ನೀನು, ನಿನ್ನದು, ನಿನಗಾಗಿ' ಎಂಬ ಭಾವದಿಂದ ಆತ್ಮಾತ್ಮೀಯಗಳು ಅವನವು, ಅವುಗಳ ರಕ್ಷಣೆಯ ಭಾರವೂ ಅವನದು, ಅವುಗಳ ರಕ್ಷಣೆಯ ಫಲವೂ ಅವನದೇ' ಎಂದು ಅನುಸಂಧಾನ ಮಾಡುತ್ತಾ ಅವನನ್ನು ಮರೆಹೊಗುವುದು ಶರಣಾಗತಿ. ಇದನ್ನೇ ಆಚಾರ್ಯರು,

'ಅಹಂ ಮದ್ರಕ್ಷಣಭರಃ ಮದ್ರಕ್ಷಣ ಫಲಂ ತಥಾ |
ನ ಮಮ ಶ್ರೀಪತೇರೇವೇತ್ಯಾತ್ಮಾನಂ ನಿಕ್ಷಿಪೇದ್ಬುಧಃ ||

ಎಂದು ನ್ಯಾಸದಶಕದಲ್ಲಿ ತಿಳಿಸಿದ್ದಾರೆ.

## ಪ್ರಪತ್ತಿ ಯಾರಿಗೆ ?

ಪ್ರಪತ್ತಿಯ ಸ್ವರೂಪವನ್ನೂ ಪ್ರಪತ್ತಿಗೆ ಯಾರು ಅಧಿಕಾರಿಗಳೆಂಬುದನ್ನೂ ಶ್ರೀಮದಾಚಾರ್ಯರು "ನಿತ್ಯಾಲಸಾರ್ಹಮಭಯಂ ನಿರಪೇಕ್ಷಮನ್ಯೈಃ ವಿಶ್ವಾಧಿಕಾರಮಖಿಲಾಭಿಮತ ಪ್ರಸೂತಿಮ್ |" ಎಂಬ ಶ್ಲೋಕದಲ್ಲಿ ನಿರೂಪಿಸಿದ್ದಾರೆ. (ಶ್ಲೋಕ ೨೬) ಪ್ರಪತ್ತಿಗೆ ಷಡಂಗಯೋಗವೆಂದು ಹೆಸರು. ಯಮ ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ ಧಾರಣಾಧ್ಯಾನಗಳು ಅಂಗಗಳಾಗಿ ಸಮಾಧಿಯು ಅಂಗಿ ಅಥವಾ ಪ್ರಧಾನಾಂಶವಾಗಿರುವ ಯೋಗಕ್ಕೆ ಅಷ್ಟಾಂಗ ಯೋಗವೆಂದು ಹೆಸರಿರುವಂತೆ ಇಲ್ಲಿಯೂ ಪ್ರಧಾನವಾದ ಆತ್ಮನಿಕ್ಷೇಪವು ಅಂಗಿ ಯಾಗಿ ಉಳಿದವು ಐದೂ ಅಂಗಗಳಾಗಿವೆ. ಈ ಪ್ರಪತ್ತಿ ಅಶಕ್ತರಿಗಾಗಿಯೇ

ಇರುವ ಉಪಾಯ. ಭಕ್ತಿಯೋಗವನ್ನನುಷ್ಠಿಸಲು ಅಸಮರ್ಥರಾದವರು, ಅದಕ್ಕೆ ಬೇಕಾದ ಜ್ಞಾನಾದಿಗಳಿಲ್ಲದವರು, ಭಕ್ತಿಯೋಗಕ್ಕೆ ಬೇಕಾದ ಜಾತಿಗುಣಾದಿ ಯೋಗ್ಯತೆ ಇಲ್ಲದವರು ಭಕ್ತಿಯೋಗವು ನಿಷ್ಪನ್ನವಾಗುವವರೆಗೂ ಆಗುವ ಕಾಲ ವಿಳಂಬವನ್ನು ಸಹಿಸಲಾರದವರು, ಭಗವಂತನ ಪ್ರಾಪ್ತಿಯಲ್ಲಿ ತೀವ್ರವಾದ ಆರ್ತಿಯುಳ್ಳವರು ಪ್ರಪತ್ತಿಗೆ ಅಧಿಕಾರಿಗಳು. ಭಕ್ತಿಯೋಗಕ್ಕೆ ಅಧಿಕಾರ ಇರುವವರಿಗೂ, ಇಲ್ಲದವರಿಗೂ ಸಮಾನವಾಗಿ ಪ್ರಪತ್ತಿಯು ಅನ್ವಯಿಸುತ್ತದೆ. ಭಕ್ತಿಯೋಗಕ್ಕೆ ಇರಬೇಕಾದಂತೆ ಕರ್ಮಯೋಗ ಜ್ಞಾನಯೋಗಗಳ ಅಪೇಕ್ಷೆಯಾಗಲೀ ಧ್ಯಾನಾದಿಗಳಾಗಲಿ ಇದಕ್ಕೆ ಬೇಕಾಗಿಲ್ಲ. ಎಲ್ಲ ಜಾತಿಯವರಿಗೂ ಎಲ್ಲ ಅವಸ್ಥೆಗಳವರಿಗೂ ಪ್ರಪತ್ತಿಗೆ ಅವಕಾಶವಿದೆ. ಭಕ್ತಿಯೋಗದಿಂದ ಹೇಗೆ ಐಹಿಕಾಮುಷ್ಮಿಕ ಫಲ ಪ್ರಾಪ್ತಿಯಾಗುವುದೋ ಹಾಗೆಯೇ ಪ್ರಪತ್ತಿಯಿಂದಲೂ ಕೋರಿದ ಫಲ ದೊರಕುತ್ತದೆ. ಅರ್ಥಪ್ರಾಪ್ತಿಯಾಗಲೀ, ಮುಕ್ತಿಪ್ರಾಪ್ತಿಯಾಗಲೀ ಇದರಿಂದ ಉಂಟಾಗುತ್ತದೆ. ಹೀಗೆ ಪ್ರಪತ್ತಿಯು ಭಕ್ತ್ಯಾದಿಗಳಲ್ಲಿ ಅಶಕ್ತರಾದವರಿಗೆ ತಕ್ಕುದಾಗಿಯೂ, ಮತ್ತೊಂದರ ಅಪೇಕ್ಷೆಯನ್ನು ಹೊಂದಿರದೆಯೂ, ಸರ್ವಾಧಿಕಾರಿಕವಾಗಿಯೂ, ಸಕಲಾಭೀಷ್ಟಪ್ರದವಾಗಿಯೂ. ಸುಕರವಾಗಿಯೂ, ಸರ್ವಾನಿಷ್ಟ ನಿವರ್ತಕವಾಗಿಯೂ, ಶೀಘ್ರಫಲಪ್ರದವಾಗಿಯೂ, ಒಂದೇ ಒಂದು ಬಾರಿ ಅನುಷ್ಠಿಸಲ್ಪಡಬೇಕಾಗಿಯೂ ಇದೆ. ಇದರಲ್ಲಿ ಭಕ್ತಿಯೋಗದ ಅಪಾಯಗಳಾಗಲೀ ಕಷ್ಟಗಳಾಗಲೀ ಇಲ್ಲ. ಅದರ ಗುಣಗಳೆಲ್ಲಾ ಇವೆ. ಭಕ್ತಿಯೋಗ ನಿಷ್ಠನು ಪ್ರಾರಬ್ಧಕರ್ಮದ ಕ್ಷಯದವರೆಗೂ ಫಲಪ್ರಾಪ್ತಿಗೆ ಕಾಯಬೇಕಾದಂತೆ ಪ್ರಪನ್ನನು ಕಾಯಬೇಕಾದುದಿಲ್ಲ. ತನ್ನ ಆರ್ತಿಗನುಗುಣವಾಗಿ ಆ ಕ್ಷಣದಲ್ಲಿಯೇ ಆಗಲೀ ಅಥವಾ ಆ ದೇಹದ ಕೊನೆಯಲ್ಲಿಯಾಗಲೀ ಪ್ರಪನ್ನನು ಫಲವನ್ನು ಪಡೆಯುತ್ತಾನೆ. ಈ ಪ್ರಪತ್ತಿಯೂ ಬ್ರಹ್ಮವಿದ್ಯೆಗಳಲ್ಲಿ ಒಂದಾಗಿದೆ ಎಂಬುದನ್ನು "ನಾನಾ ಶಬ್ದಾದಿ ಭೇದಾತ್" ಎಂಬ ಸೂತ್ರದಲ್ಲಿ ಸೂಚಿಸಿದ್ದಾರೆ. ಭಕ್ತಿಯೋಗವು ಪೂರ್ಣಗೊಳ್ಳಲೂ ಪ್ರಪತ್ತಿ ಅನಿವಾರ್ಯ ಭಗವಂತನ ಚರಣ ಕಮಲಗಳಲ್ಲಿ ಭಕ್ತಿಪೂರ್ವಕವಾಗಿ ತನ್ನನ್ನೂ ತನ್ನದನ್ನೂ ಅರ್ಪಿಸಿದ ಹೊರತು ಯಾವ ಸಿದ್ಧಿಯೂ ಆಗದು. ಹೀಗಾಗಿ ಭಕ್ತಿಗೆ ಪ್ರಪತ್ತಿಯು ಆವಶ್ಯಕವಾದ ಅಂಗ. ಪ್ರಪತ್ತಿಯು ನೇರವಾಗಿಯೂ ಮೋಕ್ಷಕ್ಕೆ ಉಪಾಯವಾಗುತ್ತದೆ. ಭಕ್ತಿ ಪ್ರಪತ್ತಿಗಳಿಂದ ಪ್ರಸನ್ನನಾದ ದೇವನು ಫಲಪ್ರದನಾಗುವುದರಿಂದ ಪ್ರಪತ್ತಿಯೂ

ಸಾಕ್ಷಾತ್ತಾಗಿ ಮೋಕ್ಷೋಪಾಯವಾಗುತ್ತದೆ. ಇದು ಭಕ್ತಿಯೋಗಕ್ಕಿಂತ ಹೆಚ್ಚಳವನ್ನು ಹೊಂದಿದೆ ಎನ್ನುವುದನ್ನು–

" ಸತ್ಕರ್ಮನಿರತಾಶ್ಶುದ್ಧಾಃ ಸಾಂಖ್ಯಯೋಗವಿದಸ್ತಥಾ ।
ನಾರ್ಹಂತಿ ಶರಣಸ್ಥಸ್ಯ ಕಲಾಂ ಕೋಟಿತಮೀಮಪಿ ॥ "

ಎಂದು ಹೇಳಿದ್ದಾರೆ.

ಪ್ರಪತ್ತಿಯನ್ನು ಮಾಡಲು ಅವಶ್ಯಕವಾಗಿ ಬೇಕಾದುದೇನು ಎಂದರೆ ಮೂರು ಅಂಶಗಳೆಂದು ಶಾಸ್ತ್ರಜ್ಞರು ಹೇಳಿದ್ದಾರೆ. ಮೊದಲನೆಯದಾಗಿ ತನಗೂ ಪರಮಾತ್ಮನಿಗೂ ಇರುವ **ಸಂಬಂಧ ಜ್ಞಾನ.** ಇದನ್ನು ಶಾಸ್ತ್ರಗಳಿಂದಲೂ ಗುರೂಪದೇಶದಿಂದಲೂ ಪಡೆಯಬಹುದು. ಎರಡನೆಯ ಅಂಶವೇ **ಆಕಿಂಚನ್ಯ.** ಕರ್ಮ, ಜ್ಞಾನ, ಭಕ್ತಿಗಳೆಂಬ ಇತರ ಉಪಾಯಗಳನ್ನು ಅನುಷ್ಠಿಸುವ ಸಾಮರ್ಥ್ಯ ತನಗೆ ಇಲ್ಲವೆಂಬ ಅರಿವು ಇರಬೇಕು. ಮೂರನೆಯ ಅಂಶ **ಅನನ್ಯಗತಿತ್ವ.** ಭಗವಂತನನ್ನು ಬಿಟ್ಟು ಬೇರೊಬ್ಬ ರಕ್ಷಕನಿಲ್ಲವೆಂಬ ದೃಢ ನಿಶ್ಚಯವಿರಬೇಕು. ಹಾಗೆಯೇ ಭಗವತ್ಪ್ರಾಪ್ತಿಗಿಂತ ಬೇರೆಯಾದ ಪ್ರಯೋಜನದಲ್ಲಿ ಅಪೇಕ್ಷೆಯೂ ಇರಬಾರದು. ಇಂಥವರು ಪ್ರಪತ್ತಿಯನ್ನನುಷ್ಠಿಸಲು ಅಧಿಕಾರಿಗಳು.

## ಪ್ರಪತ್ತಿಯ ಅಂಗಗಳು

ಆಚಾರ್ಯರು ' ಸ್ವಾಮಿನ್ ಭವ ಸ್ವಯಮುಪಾಯ ಇತೀರಯಂತಃ ತ್ವಯ್ಯರ್ಪಯಂತಿ ನಿಜಭಾರಮಪಾರಶಕ್ತೌ । ' ಎಂಬ ಶ್ಲೋಕದಲ್ಲಿ (ಶ್ಲೋಕ ೨೭) ಪ್ರಪತ್ತಿಯ ಅಂಗಗಳನ್ನೂ, ಅದರ ಅನುಷ್ಠಾನ ಕ್ರಮವನ್ನೂ ನಿರೂಪಿಸಿದ್ದಾರೆ. ಷಡಂಗಯೋಗವೆಂದು ಹೆಸರಾದ ಪ್ರಪತ್ತಿಗೆ ಐದು ಅಂಗಗಳಿವೆ. 'ಆತ್ಮಸಮರ್ಪಣ' ' ನ್ಯಾಸ ', ' ಭರಸಮರ್ಪಣ ' ಅಥವಾ ರಕ್ಷಣೆಯ ಭಾರವನ್ನು ಒಪ್ಪಿಸುವುದು ಇಲ್ಲಿ ಪ್ರಧಾನವಾದ ಅಂಶ. ಹೀಗೆ ಆತ್ಮರಕ್ಷಣೆಯ ಭಾರವನ್ನು ಒಪ್ಪಿಸುವಾಗ ನಡೆದುಕೊಳ್ಳುವ ಬಗೆಯನ್ನು ಅಂಗಗಳು ಸೂಚಿಸುತ್ತವೆ.

ಆನುಕೂಲ್ಯಸ್ಯ ಸಂಕಲ್ಪಃ ಪ್ರಾತಿಕೂಲ್ಯಸ್ಯವರ್ಜನಮ್ ।
ರಕ್ಷಿಷ್ಯತೀತಿ ವಿಶ್ವಾಸಃ ಗೋಪ್ತೃತ್ವವರಣಂ ತಥಾ ॥
ಆತ್ಮನಿಕ್ಷೇಪ ಕಾರ್ಪಣ್ಯೇ ಷಡ್ವಿಧಾ ಶರಣಾಗತಿಃ ॥

ಎಂದು ಪ್ರಪತ್ತ್ಯಂಗಗಳನ್ನು ಹೇಳಿದ್ದಾರೆ. ಭಗವಂತನಿಗೆ ಅನುಕೂಲವಾದುದನ್ನೇ ಮಾಡುವೆನೆಂದು ಸಂಕಲ್ಪಿಸುವುದೂ, ಅವನಿಗೆ ಪ್ರತಿಕೂಲವಾದುದನ್ನು ಬಿಟ್ಟು ಬಿಡುವುದೂ ಇವಕ್ಕೆ ಎರಡು ಅಂಗಗಳು. ಇವುಗಳಲ್ಲಿ ಒಂದು ಪ್ರವೃತ್ತಿ ರೂಪ ವಾದುದು. ಮತ್ತೊಂದು ನಿವೃತ್ತಿರೂಪವಾದುದು ಇವೆರಡರಿಂದಲೂ ಭಗವಂತ ನಿಗೆ ಅಭಿಮತವಾದುದನ್ನೇ ಮಾಡಲು ನಿಶ್ಚಯಿಸಿದಂತಾಗುತ್ತದೆ. ನಾವು ಪರಮಾತ್ಮನಿಗೆ ದಾಸಭೂತರಾಗಿರುವುದೇ ಇದಕ್ಕೆ ಕಾರಣವಾಗಿದೆ. ನಮ್ಮಲ್ಲಿ ಈ ಶೇಷತ್ವ ಜ್ಞಾನ ಉಂಟಾದಾಗ ಸರ್ವ ಪ್ರಕಾರದಿಂದಲೂ ನಮಗೆ ಸ್ವಾಮಿಯಾಗಿ ರುವ ದೇವದೇವನ ಅಭಿಮತವನ್ನು ಅನುವರ್ತಿಸಲು ನಿಶ್ಚಯಿಸುತ್ತೇವೆ. ಇವು ಗಳೆರಡರ ಸಂಕಲ್ಪದಿಂದ ಮತ್ತು ಅನುಷ್ಠಾನದಿಂದ ನಾವು ಭಗವಂತನ ಆಜ್ಞೆ ಯನ್ನು ಅನುಸರಿಸುವವರಾಗುತ್ತೇವೆ. ಹಾಗೂ ಆಜ್ಞಾತಿಲಂಘನದ ಅಪಾಯ ದಿಂದ ಪಾರಾಗುತ್ತೇವೆ. ಕಾರ್ಪಣ್ಯವೆಂಬುದು ನಮ್ಮ ಅಶಕ್ತಿಯ ಅನುಸಂಧಾನ. ನಾವೇ ನಮ್ಮನ್ನು ರಕ್ಷಿಸಿಕೊಳ್ಳಬಲ್ಲೆವೆಂಬ ಗರ್ವದ ಹಾನಿ. ಭಗವಂತನ ಕರುಣೆಯನ್ನು ಉತ್ತಂಭನಗೊಳಿಸುವುದು ನಮ್ಮ ಕಾರ್ಪಣ್ಯ. ಯಥಾರ್ಥವಾದ ನಮ್ಮ ಅನನ್ಯ ಶರಣತ್ವ ಮತ್ತು ಅನನ್ಯ ಗತಿತ್ವವನ್ನು ಸ್ಮರಿಸಿಕೊಂಡು ನಮ್ಮ ಅಶಕ್ತಿಯನ್ನು ನಿವೇದಿಸಿಕೊಳ್ಳುವುದು ಕಾರ್ಪಣ್ಯದಿಂದ. 'ಕಾರ್ಪಣ್ಯೇನಾಪ್ಯು ಪಾಯಾನಾಂ ವಿನಿವೃತ್ತಿರಿಹೇರಿತಾ' ಎಂದಂತೆ ಇತರ ಉಪಾಯಗಳ ಕಡೆ ದೃಷ್ಟಿ ಹೋಗದಂತೆ ಮಾಡುವ ಅನನ್ಯೋಪಾಯತೆಯ ಸಿದ್ಧಿಗೆ ಇದು ಕಾರಣ. 'ವಿಗತಾ ತಿಶಂಕಾಃ' (ಶ್ಲೋಕ ೨೭) ಎಂಬ ಪದ ಪ್ರಯೋಗದಿಂದ ಆಚಾರ್ಯರು ಮಹಾ ವಿಶ್ವಾಸವನ್ನು ನಿರೂಪಿಸಿಸಿದ್ದಾರೆ. 'ರಕ್ಷಿಷ್ಯತೀತಿ ವಿಶ್ವಾಸಾದಭೀಷ್ಟೋ ಪಾಯಕಲ್ಪನಮ್' ಎಂದಂತೆ ನಾವು ಉಪಾಯ ಪರಿಗ್ರಹ ಮಾಡುವುದಕ್ಕೆ ಇದು ಕಾರಣ. ಯಾರು ನಮ್ಮನ್ನು ಕಾಪಾಡಲು ಸಮರ್ಥರೆಂದು ನಮಗೆ ದೃಢವಿಶ್ವಾಸ ವಿದೆಯೋ ಅಂತಹವರಲ್ಲಿ ನಮ್ಮ ರಕ್ಷಣೆಯ ಭಾರವನ್ನಿಡುತ್ತೇವೆ. ಈ ವಿಶ್ವಾಸ ದಿಂದಲೇ ಮುಂದೆಯೂ ನಿರ್ಭರತೆ ಸಾಧ್ಯವಾಗುತ್ತದೆ. ನಮ್ಮ ಅಜ್ಞತ್ವ, ಅಲ್ಪತ್ವ,

ಅಶಕ್ತತ್ವವನ್ನೂ ಭಗವಂತನ ಸರ್ವಜ್ಞತ್ವ, ಮಹತ್ವ, ಸರ್ವಶಕ್ತತ್ವ ಮತ್ತು ಪರಮಕಾರುಣಿಕತ್ವವನ್ನೂ ನಾವು ಮನಗಂಡಾಗ ಅವನಿಂದ ನಮ್ಮಗೆ ರಕ್ಷಣೆ ಒದಗುವುದು ನಿಶ್ಚಿತವೆಂಬ ನಂಬಿಕೆ ಉಂಟಾಗುವುದು. ಯಾವ ಬಗೆಯ ಕುನೀತಿಗಳಿಂದಲೂ ಅಲುಗಾಡಿಸಲಾಗದ ಈ ನಂಬಿಕೆಯೇ ಮಹಾ ವಿಶ್ವಾಸ. ಇದು ಪ್ರಪತ್ತಿ ಕಾಲಕ್ಕೆ ಮೊದಲು ಪ್ರಪತ್ತಿಯನ್ನು ಮಾಡಲು ಪ್ರೇರಕವಾಗುವಂತೆ ಪ್ರಪತ್ತಿಮಾಡಿದ ಮೇಲಿನ ಕಾಲದಲ್ಲಿ ನಿರ್ಭರತೆಯನ್ನುಂಟುಮಾಡಲೂ ಕಾರಣವಾಗುತ್ತದೆ. 'ಸ್ವಾಮಿನ್ ಭವ ಸ್ವಯ ಮುಪಾಯ ಇತಿ' ಎಂದು ಬೇಡುವುದು ಗೋಪ್ತೃತ್ವವರಣವೆನ್ನಿಸುವುದು. ಧರ್ಮ, ಅರ್ಥ ಕಾಮಗಳಂತೆ ಮೋಕ್ಷವೂ ಒಂದು ಪುರುಷಾರ್ಥವಾದ ಕಾರಣ ಇತರ ಪುರುಷಾರ್ಥಗಳನ್ನು ಬೇಡುವಂತೆ ಮೋಕ್ಷಕ್ಕೂ ಬೇಡಿಕೆಯನ್ನು ಸಲ್ಲಿಸಬೇಕು. 'ಗೋಪ್ತೃತ್ವವರಣಂ ನಾಮ ಸ್ವಾಭಿಪ್ರಾಯ ನಿವೇದನಮ್ |' ಎಂದು ಹೇಳಿರುವಂತೆ ಮೋಕ್ಷದ ವಿಚಾರದಲ್ಲಿ ತನ್ನ ಅಪೇಕ್ಷೆಯನ್ನು ನಿವೇದಿಸುವುದೂ ಪ್ರಪತ್ತಿಗೆ ಒಂದು ಅಂಗವಾಗಿದೆ. ನಾವು ಬೇಡದೆ ಹೋದರೆ ಅವನು ನಮ್ಮನ್ನು ರಕ್ಷಿಸನು ಯಾರು ಯಾವ ಫಲವನ್ನು ಬೇಡಿದರೂ ಅದನ್ನು ನೀಡತಕ್ಕ ಕಲ್ಪವೃಕ್ಷನಾದ ಪರಮಾತ್ಮನಲ್ಲಿ ಮೋಕ್ಷಕ್ಕಾಗಿ ನಮ್ಮ ಬೇಡಿಕೆಯನ್ನು ಸಲ್ಲಿಸಲೇಬೇಕು. ಮೇಲೆ ಹೇಳಿದ ಆನುಕೂಲ್ಯ ಸಂಕಲ್ಪ, ಪ್ರಾತಿಕೂಲ್ಯವರ್ಜನ, ಮಹಾ ವಿಶ್ವಾಸ, ಕಾರ್ಪಣ್ಯ ಮತ್ತು ಗೋಪ್ತೃತ್ವವರಣ ಇವು ಐದೂ ಪ್ರಪತ್ತಿಗೆ ಅಂಗಗಳು. ರಕ್ಷಿಸಲ್ಪಡಬೇಕಾದ ವಸ್ತುವನ್ನು ಈ ಐದು ಅಂಗಗಳೊಡನೆ ರಕ್ಷಕನಾದ ಪರಮಾತ್ಮನಲ್ಲಿ ಅರ್ಪಿಸಬೇಕು. ಅದೇ ಆತ್ಮನಿಕ್ಷೇಪ. ಈ ಸಮರ್ಪಣೆ ಒಂದೇ ಒಂದು ಬಾರಿ ಆಗತಕ್ಕದ್ದು. 'ಪ್ರಣವೋಧನುಃ ಶರೋಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ | ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ||' ಎಂಬಲ್ಲಿ ಹೇಳಿರುವಂತೆ ದೃಢನಾದ ಧಾನುಷ್ಕನ ಕಾರ್ಯಕ್ಕೆ ಇದನ್ನು ಹೋಲಿಸಿದೆ. ಮಹಾ ವಿಶ್ವಾಸಾದಿಗಳಿಂದ ಕೂಡಿ ಆಗುವ ಪ್ರಪತ್ತಿ ಒಮ್ಮೆಯೇ ವಿನಾ ಅನೇಕಸಲವಿಲ್ಲ. ಮತ್ತೊಮ್ಮೆ ಮಾಡುವುದೆಂದರೆ ವಿಶ್ವಾಸದ ಪೂರ್ತಿ ಇಲ್ಲವೆಂದಾಗುವುದು. ಈ ಶರಣಾಗತಿಯನ್ನು ಬ್ರಹ್ಮಾಸ್ತ್ರಕ್ಕೆ ಹೋಲಿಸಿದ್ದಾರೆ. ಬ್ರಹ್ಮಾಸ್ತ್ರವು ಇತರ ಅಸ್ತ್ರಗಳ ಸಂಬಂಧವನ್ನೇ ಸಹಿಸದು. ಇದೂ ಹಾಗೆಯೇ ಸರಿ. ಮತ್ತೊಂದು ಉಪಾಯದ ಅನ್ವಯವೂ ಇದಕ್ಕೆ ಆಗಬಾರದು. ಆಗ ತಾನೇ ಅದು ಸಫಲವಾಗುವುದು.

ಶ್ರೀಮದ್ರಾಮಾಯಣದಲ್ಲಿ ತ್ರಿಜಟೆಯ ವೃತ್ತಾಂತದಲ್ಲಿಯೂ, ವಿಭೀಷಣ ಶರಣಾಗತಿಯ ಪ್ರಕರಣದಲ್ಲಿಯೂ ಈ ಬಗೆಯ ಪೂರ್ಣ ಪ್ರಪತ್ತಿಯನ್ನು ನೋಡ ಬಹುದು. ಈ ಅರ್ಥ ವಿಶೇಷಗಳನ್ನೆಲ್ಲಾ ದ್ವಯಮಂತ್ರದಲ್ಲಿ ಕಾಣಬಹುದು.

## ಪೂರ್ಣಪ್ರಪದನ

ಮೋಕ್ಷಫಲಕ್ಕಾಗಿ ಅನುಷ್ಠಿಸುವ ಪ್ರಪತ್ತಿಯು ಪೂರ್ಣ ಪ್ರಪತ್ತಿ ಎನಿಸು ವುದು. ಈ ಲೋಕದಲ್ಲಿ ಬಗೆ ಬಗೆಯ ಅಧಿಕಾರಿಗಳಿದ್ದಾರೆ. ಭಗವಂತನೇ ಗೀತೆ ಯಲ್ಲಿ ಭಕ್ತರು ನಾಲ್ಕು ಬಗೆ ಎಂದು ತಿಳಿಸಿದ್ದಾನೆ. ಐಶ್ವರ್ಯಕಾಮಿಗಳೂ, ಆತ್ಮಾನುಭವಕಾಮಿಗಳೂ, ಭಗವತ್ಕಾಮಿಗಳೂ ಭಗವಂತನನ್ನೇ ಬೇಡುತ್ತಾರೆ. ಪ್ರಪತ್ತಿಯಿಂದಲೂ ಇವೆಲ್ಲ ಫಲಗಳೂ ಲಭಿಸುತ್ತವೆ. ಹೀಗಿರಲು ಕೇವಲ ಮೋಕ್ಷೇಚ್ಛೆಯಿಂದ ಭಗವತ್ಪ್ರಾಪ್ತಿಯನ್ನೇ ಬಯಸಿ ಪ್ರಪತ್ತಿ ಮಾಡುವವರು ಬಹಳ ವಿರಳರು ಎಂದೂ ಅಂಥ ಪ್ರಪನ್ನರ ಲಾಭ ಭಗವಂತನಿಗೆ ಅಲಭ್ಯ ಲಾಭ ವೆಂದೂ 'ದೀಪ ಪ್ರಕಾಶಲಭಸೇ ಸುಚಿರಾಕೃತೀವ ನ್ಯಸ್ತಾತ್ಮನಸ್ತವ ಪದೇ ನಿಭೃತಾನ್ ಪ್ರಪನ್ನಾನ್' ಎಂದು ಆಚಾರ್ಯರು ವರ್ಣಿಸಿದ್ದಾರೆ (ಶ್ಲೋಕ ೨೮)

ನದೇವಲೋಕಾಕ್ರಮಣಂ ನಾಮರತ್ವಮಹಂ ವೃಣೇ ।
ಐಶ್ವರ್ಯಂ ವಾಪಿಲೋಕಾನಾಂ ಕಾಮಯೇ ನ ತ್ವಯಾವಿನಾ ॥

ಎಂದು ಲಕ್ಷ್ಮಣನು ಹೇಳಿದಂತೆ ಭಗವಂತನನ್ನು ಬಿಟ್ಟು ಮತ್ತೊಂದನ್ನೂ ಬಯಸದ ಅನನ್ಯ ಭಕ್ತರು ಬಹಳ ದುರ್ಲಭರು.

ಅತ್ರರಕ್ಷಾಭರನ್ಯಾಸಸ್ಸಮಸ್ಸರ್ವ ಫಲಾರ್ಥಿನಾಮ್ ।
ಸ್ವರೂಪಫಲ ನಿಕ್ಷೇಪಸ್ತ್ವಧಿಕೋ ಮೋಕ್ಷಕಾಂಕ್ಷಿಣಾಮ್ ॥

ಎಂಬಂತೆ ಭಾಗ್ಯಶಾಲಿಗಳಾದವರು ಸ್ವರೂಪಸಮರ್ಪಣ, ಫಲಸಮರ್ಪಣ ಮತ್ತು ಭರಸಮರ್ಪಣಗಳನ್ನೆಲ್ಲಾ ಭಗವಂತನಲ್ಲಿ ಮಾಡುವರು. ಮೋಕ್ಷವನ್ನಾಗಲೀ ಇತರ ಫಲವನ್ನಾಗಲೀ ಬಯಸುವವರು ಭಗವಂತನಲ್ಲಿ ರಕ್ಷಾಭರವನ್ನರ್ಪಿಸುತ್ತಾರೆ. ಇತರ ಫಲವನ್ನಪೇಕ್ಷಿಸುವವರು ಅದರಿಂದ ಉಂಟಾಗುವ ಫಲದಲ್ಲಿ ಆಸಕ್ತರಾಗಿರು

ತ್ತಾರೆ. ಅದನ್ನು ತಾವು ಅನುಭವಿಸಲು ಕಾತರರಾಗಿದ್ದಾರೆ. ಆದರೆ ಮೋಕ್ಷೇಚ್ಛು ಗಳು ತಮ್ಮ ಆತ್ಮವಸ್ತುವನ್ನೂ ತಮಗೆ ಸೇರಿದ ಇತರ ವಸ್ತುಗಳನ್ನೂ ಭಗವಂತ ನದೇ ಎಂದು ಅನುಸಂಧಾನಮಾಡಿ ಸ್ವರೂಪ ಸಮರ್ಪಣ ಮಾಡುತ್ತಾರೆ. ರಕ್ಷಣೆಯ ಭಾರ ಅವನದೇ ಎಂದು ಒಪ್ಪಿಸುವುದರ ಜತೆಗೆ ರಕ್ಷಣೆ ಮಾಡಿದುದರ ಪ್ರಯೋಜನವೂ ಪ್ರಧಾನ ಫಲಿಯಾದ ಅವನದೇ ಎಂದು ಅನುಸಂಧಾನ ಮಾಡುವರು ಶೇಷತ್ವಾನು ಸಂಧಾನದೊಡನೆ ಭಗವಂತನಲ್ಲಿ ಶರಣಾಗುವ ಕ್ರಮ ಹೀಗಿದೆ. ನಾನು ಮಾಡುವವನು ಎಂಬ ಕರ್ತೃತ್ವದ ಭಾವನೆಯನ್ನೂ, ಇದು ನನ್ನದು ಎಂಬಂಥ ಸಂಬಂಧದ ಭಾವನೆಯನ್ನೂ ಇದರಿಂದಾಗುವ ಫಲ ನನಗೆ ಎಂಬ ಫಲಭಾವನೆಯನ್ನೂ ತ್ಯಾಗಮಾಡಬೇಕು. ಆನುಕೂಲ್ಯ ಸಂಕಲ್ಪವೇ ಮುಂತಾದ ಅಂಗಪಂಚಕದ ಅನುಸಂಧಾನ ಮಾಡಬೇಕು. ಈ ಅನುಸಂಧಾನ ಗಳಿಂದೊಡಗೂಡಿದಂತೆ ಗುರು ಪರಂಪರೆಯನ್ನು ನಮಿಸಿ ದ್ವಯಮಂತ್ರೋಚ್ಚಾರಣೆ ಯನ್ನು ಮಾಡುತ್ತಾ ಸ್ವರೂಪ, ಭರ ಮತ್ತು ಫಲಸಮರ್ಪಣೆಗಳೊಡನೆ ಸರ್ವಶಕ್ತ ನಲ್ಲಿ ಮಾಡುವ ಆತ್ಮಸಮರ್ಪಣೆ ಪೂರ್ಣ ಪ್ರಪತ್ತಿ ಎನಿಸುವುದು. ಇದನ್ನೇ ಆಚಾರ್ಯರು

" ಸ್ವಾಮಿನ್ ಸ್ವಶೇಷಂ ಸ್ವವಶಂ ಸ್ವಭರತ್ವೇನ ನಿರ್ಭರಂ |
ಸ್ವದತ್ತ ಸ್ವಧಿಯಾ ಸ್ವಾರ್ಥಂ ಸ್ವಸ್ಮಿನ್ ನ್ಯಸ್ಯಸಿಮಾಂಸ್ವಯಂ ॥ "

ಎಂದು ನ್ಯಾಸದಶಕದಲ್ಲಿ ಹೇಳಿದ್ದಾರೆ.

ಪ್ರಪತ್ತಿ ಮಾಡುವಾಗ ಅವರವರ ಅಧಿಕಾರಾನುಗುಣವಾಗಿ ಮಂತ್ರ ಗಳನ್ನು ಬಳಸಬಹುದೆಂಬುದನ್ನು " ಸ್ವಾಧಿಕ್ರಿಯಾ ಸಮುಚಿತೈರ್ಯದಿವಾನ್ಯ ವಾಕ್ಯೈಃ" ಎಂಬುದಾಗಿ ಆಚಾರ್ಯರು (ಶ್ಲೋಕ ೨೯) ತಿಳಿಸಿದ್ದಾರೆ. ಸಂಪ್ರ ದಾಯ ಪರಂಪರೆಯಿಂದ ಲಬ್ಧವಾಗಿರುವ ವೇದಮಂತ್ರಗಳಿಂದಾಗಲೀ ಪರಕಾಲ ಪರಾಂಕುಶಾದಿ ದಿವ್ಯಸೂರಿಗಳ ಸಿರಿನುಡಿಗಳಿಂದಾಗಲೀ ಭಗವಂತನ ಪದದ್ವಯ ದಲ್ಲಿ ಶರಣಾಗತಿ ಮಾಡಬಹುದು. ವೈದಿಕ ಮಂತ್ರಗಳು ಪ್ರಣವಸಹಿತವಾಗಿವೆ. ತಾಂತ್ರಿಕ ಮಂತ್ರಗಳು ಪ್ರಣವರಹಿತವಾಗಿವೆ. ಇತಿಹಾಸ ಪುರಾಣಾದಿಗಳ ವಾಕ್ಯಗಳು ಸರ್ವಾಧಿಕಾರಿಕವಾಗಿವೆ. ಅವರವರ ಅಧಿಕಾರಕ್ಕೆ ತಕ್ಕಂತೆ ಮಂತ್ರ

ಗಳನ್ನು ಬಳಸಿ ಪ್ರಪತ್ತಿ ಮಾಡಬೇಕು. "ಏತೇ ಮಂತ್ರಾಃ ಪ್ರಧಾನಾಸ್ತು ವೈದಿಕಾಃ ಪ್ರಣವೈರ್ಯುತಾಃ । ಪ್ರಣವೇನ ವಿಹೀನಾಸ್ತು ತಾಂತ್ರಿಕಾ ಏವ ಕೀರ್ತಿತಾಃ ॥" ಎಂದು ಇದನ್ನು ಹೇಳಿದೆ ಪ್ರಣವಸಹಿತವಾಗಿ ಹೇಳಿದರೂ ಸರಿ, ಪ್ರಣವರಹಿತವಾಗಿ ಹೇಳಿದರೂ ಸರಿ ಈ ಮಂತ್ರಗಳು ಸರ್ವಾರ್ಥಸಾಧಕಗಳೆಂಬು ದನ್ನು "ಕಿಂ ತತ್ರಬಹುಭಿರ್ಮಂತ್ರೈಃ ಕಿಂ ತತ್ರಬಹುಭಿರ್ವ್ರತೈಃ । ನಮೋ ನಾರಾಯಣೇತಿ ಮಂತ್ರಃ ಸರ್ವಾರ್ಥ ಸಾಧಕಃ ॥" ಎಂಬಲ್ಲಿ ಹೇಳಿದ್ದಾರೆ. ಮಹಾ ವಿಶ್ವಾಸಶಾಲಿಗಳಾದ ಇಂಥ ಪ್ರಪನ್ನರು ಪರಮದುರ್ಲಭರು. "ಐಕಾಂತ್ಯಂ ಭಗವತ್ಯೇಷಾಂ ಸಮಾನಮಧಿಕಾರಿಣಾಂ" ಎಂದಂತೆ ದೇವತಾಂತರ ಸ್ಪರ್ಶವನ್ನು ಬಿಟ್ಟು ಭಗವಂತನನ್ನೇ ಭಜಿಸುವವರು ಏಕಾಂತಿಗಳು. ಇವರಲ್ಲಿಯೂ "ಜ್ಞಾನೀ ತುಪರಮೈಕಾಂತೀ" ಎಂಬಂತೆ ಪ್ರಯೋಜನಾಂತರ ಸ್ಪರ್ಶವಿಲ್ಲದವರು ಪರಮೈ ಕಾಂತಿಗಳು. ಸರ್ವಶಕ್ತನಾದ ಸರ್ವಶೇಷಿಯ ಪಾದಗಳಲ್ಲಿ ರಕ್ಷಾಭರವನ್ನರ್ಪಿಸಿ ಭಗವತ್ಪ್ರಾಪ್ತಿಗೆ ವಿಳಂಬವನ್ನು ಸಹಿಸದವರಾಗಿ ಕೇವಲ ಕೈಂಕರ್ಯೈಕ ಪ್ರಯೋ ಜನರಾಗಿರುವ ಪ್ರಪನ್ನೋತ್ತಮರು ಸರ್ವಶ್ರೇಷ್ಠರೇ ಸರಿ!

## ಪ್ರಪತ್ತಿಯನ್ನು ಮಾಡುವುದೆಂತು?

ಮೇಲೆ ಹೇಳಿದಂತೆ ಸ್ವಸ್ವರೂಪ ಪರಸ್ವರೂಪಗಳ ಅರಿವು ಪ್ರಪತ್ತ್ಯನುಷ್ಠಾ ನಕ್ಕೆ ಮೂಲಕಾರಣವಾಗುತ್ತದೆ. ನಿಶ್ಚಲವಾದ ತತ್ತ್ವಜ್ಞಾನ ಉಂಟಾಗಬೇಕಾ ದರೆ ಆಚಾರ್ಯ ಸಮಾಶ್ರಯಣವಾಗಬೇಕು ಆಚಾರ್ಯ ಸಮಾಶ್ರಯಣ ಮೋಕ್ಷಕ್ಕೆ ಅರುಣೋದಯವಿದ್ದಂತೆ. ಶ್ರೋತ್ರಿಯರೂ ಬ್ರಹ್ಮನಿಷ್ಠರೂ ಆದ ಆಚಾರ್ಯರುಗಳ ಕರುಣೆಯಿಂದ ನಮ್ಮಲ್ಲಿ ವಿವೇಕ ಉದಿಸುವುದು. ಪರಮ ದಯಾಳುಗಳಾದ ಆಚಾರ್ಯರು ನಮ್ಮ ಉದ್ಧಾರದ ಹಾದಿಯನ್ನು ನಮಗೆ ತೋರಿಕೊಡುತ್ತಾರೆ.

ಪ್ರಪತ್ತ್ಯನುಷ್ಠಾನಕ್ರಮದಲ್ಲಿ ಅನೇಕ ಮುಖಭೇದಗಳಿವೆ. ಅವುಗಳಲ್ಲಿ ಪ್ರಧಾನವಾದವು ಉಕ್ತಿನಿಷ್ಠೆ, ಆಚಾರ್ಯನಿಷ್ಠೆ ಮತ್ತು ಸ್ವನಿಷ್ಠೆ ಎಂಬವು. ಇವು ಗಳಿಗೆಲ್ಲ ಫಲ ಸಮಾನವೇ ಆದುದಾಗಿದೆ. ಆನುಕೂಲ್ಯ ಸಂಕಲ್ಪವೇ ಮೊದಲಾದ

ಅಂಗಗಳಲ್ಲಿ ಹೆಚ್ಚು ಅರಿವಿಲ್ಲದಿದ್ದರೂ ಅವನನ್ನು ಬಿಟ್ಟು ಬೇರೆ ಗತಿಯಿಲ್ಲವೆಂಬ ಕಾರ್ಪಣ್ಯದಿಂದಲೂ ಅಪೇಕ್ಷಿಸಿದರೆ ಅವನು ರಕ್ಷಿಸುವನೆಂಬ ವಿಶ್ವಾಸದಿಂದಲೂ ಕೂಡಿದವರಾಗಿ, ಶರಣ್ಯನು ತಿಳಿಯುವಂತೆ ಆಚಾರ್ಯರು ಉಪದೇಶಿಸಿದ ಪೂರ್ಣ ಪ್ರಪತ್ತಿವಾಕ್ಯವನ್ನು ತಾನೂ ಹೇಳಿ ಶರಣಾಗತಿ ಮಾಡುವುದು ಉಕ್ತಿನಿಷ್ಠೆ ಎನ್ನಿಸುವುದು. ದಾದಿಯರು ಹೇಳಿಕೊಟ್ಟಂತೆ ಮುಗ್ಧರಾದ ಸಾಮಂತ ರಾಜ ಕುಮಾರರು ಹೇಳಿ ಚಕ್ರವರ್ತಿಯಲ್ಲಿ ಶರಣು ಹೋಗುವುದು ಇದಕ್ಕೆ ನಿದರ್ಶನ ವಾಗಿದೆ. ತಾನು ಉಚ್ಚರಿಸುವ ವಾಕ್ಯಕ್ಕೆ ತನಗೇ ಅರ್ಥವೇ ಮೊದಲಾದವಾಗ ದಿದ್ದರೂ ಆ ವಾಕ್ಯ ಪರಿಪೂರ್ಣನಾದ ಭಗವಂತನ ದಯೆಯನ್ನು ಹರಿಸುವುದು. ಜ್ಞಾನರಹಿತರಾಗಿದ್ದರೂ ಶರಣಾಗತಿ ವಾಕ್ಯವನ್ನು ಹೇಳಿಕೊಟ್ಟಂತೆ ವಿಶ್ವಾಸದಿಂದ ಹೇಳಿದರೆ ಅದಕ್ಕೆ ಫಲ ಉಂಟೇ ಉಂಟು. "ಯೇನಕೇನಾಪಿ ಪ್ರಕಾರೇಣ ದ್ವಯ ವಕ್ತಾ ತ್ವಮ್" ಎಂದು ಹೇಳಿದಂತೆ ಈ ಶರಣಾಗತಿಗೆ ಫಲವುಂಟಾಗುತ್ತದೆ.

ನಮ್ಮ ರಕ್ಷಣೆಯ ಭಾರವನ್ನು ಭಗವಂತನಲ್ಲಿ ನಮ್ಮ ಪರವಾಗಿ ಒಪ್ಪಿಸಲು ಆಚಾರ್ಯರುಗಳನ್ನು ನಾವು ಬೇಡುತ್ತೇವೆ. ಆಗ ಆ ಕೃಪಾಳುಗಳು ಭಗವಂತನಲ್ಲಿ ನಮಗಾಗಿ ಬೇಡಿಕೆಯನ್ನು ಸಲ್ಲಿಸುತ್ತಾರೆ. ಇದು ಆಚಾರ್ಯನಿಷ್ಠೆ. ಇಲ್ಲಿ ನಮ್ಮ ಕೆಲಸವೆಂದರೆ ಆಚಾರ್ಯರಲ್ಲಿ ಮರೆಹೋಗುವುದೇ ಆಗಿದೆ. ಈ ಕ್ರಮದಲ್ಲಿ ಆಚಾ ರ್ಯರುಗಳು ತಮ್ಮನ್ನಾಶ್ರಯಿಸಿದ ಒಬ್ಬೊಬ್ಬ ಚೇತನನಿಗಾಗಿಯೂ ಭಗವಂತನಲ್ಲಿ ಶರಣಾಗತಿಯನ್ನು ಮಾಡುತ್ತಾರೆ. "ತವಭರೋಽಹಮಕಾರಿಷಿ ಧಾರ್ಮಿಕೈಃ" ಎಂಬಲ್ಲಿ ಈ ಆಚಾರ್ಯನಿಷ್ಠೆಯನ್ನು ಕಾಣಬಹುದು. "ದತ್ತಾಃ ಪ್ರಜಾ ಜನಕ ಪತ್ತ್ರವ ದೇಶಿಕೇಂದ್ರೈಃ" ಎಂದು ಈ ಸ್ತೋತ್ರದಲ್ಲಿ (ಶ್ಲೋ. ೩೦) ಆಚಾರ್ಯರು ಇದನ್ನು ಅನುಸಂಧಾನ ಮಾಡಿದ್ದಾರೆ. ಉಕ್ತಿನಿಷ್ಠೆಯಲ್ಲಿ ಸ್ವಪ್ರಯತ್ನವಿದೆ. ಆದರೆ ಜ್ಞಾನವೈಶದ್ಯವಿಲ್ಲ. ಆಚಾರ್ಯನಿಷ್ಠೆಯಲ್ಲಿ ಸ್ವಪ್ರಯತ್ನವೇ ಇಲ್ಲ ಆದರೂ ಫಲಪ್ರಾಪ್ತಿಯುಂಟು. ಈ ಅಂಶವನ್ನು ಆಚಾರ್ಯರು ನ್ಯಾಸತಿಲಕದಲ್ಲಿ—

ಅಂಧೋಽನಂಧ ಗ್ರಹಣವಶಗೋ ಯಾತಿ ರಂಗೇಶಯದ್ವತ್
ಪಂಗು ರ್ನೌಕಾಕುಹರ ನಿಹಿತೋ ನೀಯತೇ ನಾವಿಕೇನ |

ಎಂದು ತಿಳಿಸಿದ್ದಾರೆ.

ಜ್ಞಾನಾನುಷ್ಠಾನ ಸಂಪನ್ನರಾದವರು ತಾವೇ ನೇರವಾಗಿಯೂ ಭಗವಂತ ನಲ್ಲಿ ಪ್ರಪತ್ತಿ ಮಾಡಬಹುದು. ಇದು 'ಸ್ವನಿಷ್ಠೆ' ಎನಿಸಿಕೊಳ್ಳುವುದು. ಇವು ಗಳಲ್ಲಿ ಯಾವ ಬಗೆಯಲ್ಲಿ ಪ್ರಪತ್ತಿಯನ್ನು ಮಾಡಿದರೂ ಫಲಪ್ರಾಪ್ತಿಗೆ ಕುಂದಿಲ್ಲ.

ಪ್ರಪತ್ತಿಯ ಅನುಷ್ಠಾನದಲ್ಲಿ ಮೂರು ಬಗೆಯ ಕರ್ತವ್ಯಗಳಿವೆ. ಇವು (೧) ಪೂರ್ವಕೃತ್ಯ, (೨) ತತ್ಕಾಲಕೃತ್ಯ ಮತ್ತು (೩) ಉತ್ತರ ಕೃತ್ಯ ಎಂಬುವು. ಈ ಪೂರ್ವಕೃತ್ಯಾದಿಗಳು ಪ್ರಪತ್ತಿ ಮಾಡುವವರಿಗೂ ಪ್ರಪತ್ತಿಯನ್ನು ಯಾರಲ್ಲಿ ಮಾಡುವೆವೋ ಆ ಸರ್ವೇಶ್ವರನಿಗೂ ಅನ್ವಯಿಸುತ್ತವೆ.

ಪೂರ್ವಕೃತ್ಯ ಎಂಬುದು ಪ್ರಪತ್ತಿ ಮಾಡುವ ಮೊದಲು ನಾವು ಮಾಡ ಬೇಕಾದ ಕರ್ತವ್ಯ. ಆಚಾರ್ಯ ಸಮಾಶ್ರಯಣ, ಆಚಾರ್ಯ ಮುಖೇನ ತತ್ತ್ವಜ್ಞಾನೋಪದೇಶ ಪಡೆಯುವುದು ಮತ್ತು ಪುರುಷಕಾರವನ್ನು ಸಂಪಾದಿಸಿ ಕೊಳ್ಳುವುದು ನಮಗೆ ಪೂರ್ವಕೃತ್ಯವಾಗುತ್ತದೆ. ಪುರುಷಕಾರವೆಂದರೇನು ? ನಮಗೆ ಒಬ್ಬ ಚೇತನನು ಅಭಿಮುಖನಾಗಬೇಕಾದರೆ ಅವನ ಪ್ರಸನ್ನತೆಯನ್ನು ನಮಗೆ ಸಂಪಾದಿಸಿಕೊಡಬಲ್ಲ ಮತ್ತೊಬ್ಬ ಚೇತನನೇ ಪುರುಷಕಾರ. ಭಗವಂತನು ನಮ್ಮ ತಪ್ಪುಗಳನ್ನು ಕಾಣದೆ ನಮ್ಮ ಮೇಲೆ ತನ್ನ ಪ್ರಸನ್ನತೆಯನ್ನೇ ಬೀರುವಂತೆ ಪ್ರಭಾವ ಬೀರುವ ಶ್ರೀದೇವಿ ನಮಗೆ ಪುರುಷಕಾರ ಭೂತೆಯಾಗಿ ದ್ದಾಳೆ. ಆದ್ದರಿಂದಲೇ ಮೊದಲು ಶ್ರೀದೇವಿಯಲ್ಲಿ ಪ್ರಪತ್ತಿಮಾಡಿ ಆಕೆಯ ಅನುಗ್ರಹವನ್ನು ಪಡೆದುಕೊಂಡು ನಂತರ ಭಗವಂತನಲ್ಲಿ ಶರಣು ಹೊಗುತ್ತೇವೆ. ಆಗ ಭಗವಂತನು ನಮ್ಮ ಮೇಲೆ ತನ್ನ ಪೂರ್ಣವಾದ ಅನುಗ್ರಹವನ್ನು ಬೀರುವನು. ನೇರವಾಗಿ ಭಗವಂತನನ್ನೇ ನಾವು ಏಕೆ ಸಮೀಪಿಸಲಾರೆವೆಂದರೆ ನಮ್ಮಲ್ಲಿ ಅಂಥ ವಿಶ್ವಾಸಾದಿಗಳು ದುರ್ಲಭ. ಆದರೆ ಅನುಗ್ರಹೈಕಮಯಿಯಾದ ದೇವಿಯು ಭಗವಂತನ ದಯೆ ನಮ್ಮ ಮೇಲೆ ಹರಿಯುವಂತೆ ಮಾಡುವಳು. ಇಷ್ಟು ಪೂರ್ವ ಕೃತ್ಯ.

ಪ್ರಪತ್ತಿ ಕಾಲದಲ್ಲಿ ಮಾಡುವ ಕರ್ತವ್ಯವೆಂದರೆ ಸರ್ವಸ್ವಾಮಿಯಾದ ದೇವನಲ್ಲಿ ಅಂಗಪಂಚಕಪೂರ್ವಕವಾಗಿ ನಮ್ಮನ್ನು ನಮ್ಮ ರಕ್ಷಣೆಯ ಭಾರವನ್ನೂ, ರಕ್ಷಣೆಯ ಫಲವನ್ನೂ ಸಮರ್ಪಣ ಮಾಡುವುದು. ಹೀಗೆ ಆತ್ಮಸಮರ್ಪಣ

ಮಾಡಿದ ಮೇಲೆ ಮಾಡುವ ಕರ್ತವ್ಯವೇ 'ಉತ್ತರ ಕೃತ್ಯ'. ಪ್ರಪತ್ತಿ ಮಾಡಿದವರು ಪ್ರಪತ್ತ್ಯುತ್ತರ ಕಾಲದಲ್ಲಿ ತಮಗೆ ತಕ್ಕುದಾದ ಭಗವತ್ಕೈಂಕರ್ಯ ಭಾಗವತಕೈಂಕರ್ಯಾದಿಗಳನ್ನು ಮಾಡಿಕೊಂಡು ಬರುವುದು ಉತ್ತರಕೃತ್ಯ ವೆನಿಸುವುದು.

ಮೇಲೆ ಹೇಳಿದ ಮೂರು ಬಗೆಯ ಕರ್ತವ್ಯಗಳು ಚೇತನನಿಗೆ ಸಂಬಂಧಿಸಿದು ವಾದುವು. ಹೀಗೆಯೇ ಸರ್ವರಕ್ಷಕನಾದ ಭಗವಂತನಿಗೂ ಈ ಮೂರು ಬಗೆಯ ಕರ್ತವ್ಯಗಳಿವೆ. ಭಗವಂತನಿಗೆ ಪೂರ್ವಕೃತ್ಯ ಯಾವುದೆಂದರೆ ಪುರುಷಕಾರ ಭೂತೆಯಾದ ಶ್ರೀದೇವಿಯಲ್ಲಿಯೂ ಹಾಗೂ ಅವಳ ಪುರುಷಕಾರ ಕ್ರಿಯೆ ಯಲ್ಲಿಯೂ ಪ್ರಸನ್ನನಾಗಿರುವುದು ಪ್ರಪತ್ತಿ ಕಾಲದಲ್ಲಿ ತನ್ನಲ್ಲಿ ಮರೆಹೊಗುವ ಚೇತನರು ಸಮರ್ಪಿಸುವ ಸಮಸ್ತ ಭಾರಗಳನ್ನು ವಹಿಸಿಕೊಳ್ಳುವುದು ಭಗವಂತ ನಿಗೆ ತತ್ಕಾಲಕೃತ್ಯ. ಪ್ರಪತ್ತ್ಯುತ್ತರ ಕಾಲದಲ್ಲಿ ಸ್ವಯಂ ಪ್ರಯೋಜನವಾದ ಭಕ್ತಿಯೇ ಮೊದಲಾದವನ್ನು ಅನುಗ್ರಹಿಸಿ ತನ್ನ ಪರಿಪೂರ್ಣವಾದ ಕೈಂಕರ್ಯ ವನ್ನು ಕರುಣಿಸುವುದು ಅವನಿಗೆ ಉತ್ತರಕೃತ್ಯ ಆ ಸರ್ವಶಕ್ತನಲ್ಲಿ ನಮ್ಮ ಆತ್ಮಾರ್ಪಣೆ ಹೀಗೆ ನಡೆದರೆ ಆ ಭಗವಂತನು ನಮ್ಮ ರಕ್ಷಣೆಯ ಭಾರವನ್ನು ಹೊತ್ತು ನಮಗೆ ತನ್ನ ಕೈಂಕರ್ಯವೇ ಮೊದಲಾದವನ್ನು ಅನುಗ್ರಹ ಮಾಡು ತ್ತಾನೆ.

## ಉತ್ತರಕೃತ್ಯ ನಿರೂಪಣೆ

ಆಚಾರ್ಯರು 'ಮಧ್ಯೇಸತಾಂ ಮಹಿತ ಭೋಗ ವಿಶೇಷ ಸಿದ್ಧ್ಯೈ ಮಾಂಗಲ್ಯ ಸೂತ್ರಮಿವ ಬಿಭ್ರತಿಕಿಂಕರತ್ವಂ' (ಶ್ಲೋಕ ೩೦) ಎಂಬ ಶ್ಲೋಕ ದಿಂದ ಆರಂಭಿಸಿ ಪ್ರಪನ್ನನ ಉತ್ತರ ಕೃತ್ಯವನ್ನು ನಿರೂಪಿಸುತ್ತಾರೆ. ಭಗವಂತನಲ್ಲಿ ಮೋಕ್ಷಕ್ಕಾಗಿ ಶರಣಾಗತಿ ಮಾಡಿದವರು ಮುಂದೆ ಹೇಗೆ ನಡೆದುಕೊಳ್ಳಬೇಕು ಎಂಬುದು ಇಲ್ಲಿ ಪ್ರಸಕ್ತವಾದ ವಿಷಯ. ಪ್ರಪನ್ನ ಹೇಗೆ ನಡೆದುಕೊಳ್ಳಬೇಕೆಂಬು ದನ್ನು ಭಗವದ್ರಾಮಾನುಜರು ಹೇಳಿರುವುದನ್ನು ಆಚಾರ್ಯರು ರಹಸ್ಯತ್ರಯ ಸಾರದಲ್ಲಿ ಉಲ್ಲೇಖಿಸುತ್ತಾರೆ. ಪ್ರಪನ್ನನು ಆತ್ಮಯಾತ್ರೆಯ ಬಗ್ಗೆ ತನಗೆ ಅನ್ವಯವಿದೆ ಎಂದು ತಿಳಿಯಬಾರದು. ಅದು ಭಗವದಧೀನವಾದುದು. ತನಗೂ

ಅನ್ವಯುವಿದೆ ಎಂದು ತಿಳಿದರೆ ಮಾಡಿದ ಆತ್ಮಸಮರ್ಪಣ ಸುಳ್ಳಾಗುವುದು. ದೇಹ ಯಾತ್ರೆಯ ಬಗ್ಗೆ ತನಗೆ ಅನ್ವಯವಿದೆಯೆಂದೂ ತಿಳಿಯಬಾರದು ಅದು ಕರ್ಮಾಧೀನವಾದುದು. ಇದರಲ್ಲಿ ತನಗೂ ಅನ್ವಯವಿದೆಯೆಂದು ತಿಳಿದರೆ ನಾಸ್ತಿಕನಾದಂತೆಯೇ. ಆದರಿಂದ ತ್ರಿಕರಣ ಪೂರ್ವಕವಾಗಿ ತನಗೆ ಪ್ರಾಪ್ಯ ವಾದ ಭಗವತ್ಕೈಂಕರ್ಯದಲ್ಲಿ ಅವನು ಅನ್ವಯಿಸುವುದಷ್ಟೇ ಅವನ ಕೆಲಸ. ಈ ಬಗೆಯ ಕೈಂಕರ್ಯಗಳು ಐದು ವಿಧವಾಗಿವೆ.

೧) ಶ್ರೀಭಾಷ್ಯವನ್ನು ಓದಿ ಪ್ರವರ್ತನಗೊಳಿಸುವುದು.

೨) ಅದಕ್ಕೆ ಸಾಮರ್ಥ್ಯವಿಲ್ಲದಿದ್ದರೆ ದ್ರಾವಿಡ ಪ್ರಬಂಧವೇ ಮುಂತಾದ ಭಕ್ತೋತ್ತಮರ ಸೂಕ್ತಿಗಳನ್ನು ಓದಿ ಪ್ರವರ್ತನಗೊಳಿಸುವುದು.

೩) ಅದಕ್ಕೂ ಯೋಗ್ಯತೆ ಇಲ್ಲದಿದ್ದರೆ ದಿವ್ಯ ದೇಶಗಳಲ್ಲಿ ನಿವೇದನ, ದೀಪ ಸೇವೆ, ಮಾಲಾ ಸಮರ್ಪಣ ಮುಂತಾದವನ್ನು ನಡೆಸುವುದು.

೪) ಅದೂ ಆಗದಿದ್ದರೆ ದ್ವಯಮಂತ್ರದ ಅರ್ಥಾನುಸಂಧಾನವನ್ನು ಮಾಡು ವುದು.

೫) ಇದೂ ಆಗದಿದ್ದರೆ ನಮ್ಮವನೆಂದು ಅಭಿಮಾನಿಸುವ ವೈಷ್ಣವನನ್ನಾ ಶ್ರಯಿಸಿ ಇದ್ದುಬಿಡುವುದು.

ಇಲ್ಲಿರುವವರೆಗೂ ಭಗವದ್ಭಕ್ತರ ಜೊತೆಯಲ್ಲಿ ಬೆರೆತು ಸಂತೋಷಿಸಬೇಕು. ಭಗವದ್ದ್ವೇಷಿಗಳನ್ನು ಕಂಡರೆ ಭಯಪಟ್ಟು ದೂರ ಸಾರಬೇಕು. ಭಾಗವತರ ಪರ್ಯಂತವಾಗಿ ಭಗವತ್ಕೈಂಕರ್ಯವನ್ನು ನಡೆಸಿಕೊಂಡು ಬರಬೇಕು. ಪ್ರಪನ್ನನು ಭಗವತ್ಕೈಂಕರ್ಯವನ್ನು ಕೇವಲ ಸ್ವಯಂ ಪ್ರಯೋಜನಾರ್ಥವಾಗಿ ಅನುಷ್ಠಿಸುತ್ತಾನೆ.

'ವರ್ತಮಾನಃ ಸದಾ ಚೈವಂ ಪಾಂಚಕಾಲಿಕವರ್ತ್ಮನಾ |
ಸ್ವಾರ್ಜಿತೈಃ ಗಂಧಪುಷ್ಪಾದ್ಯೈಃ ಶುಭೈಶ್ಶಕ್ತ್ಯನುರೂಪತಃ |
ಆರಾಧಯನ್ ಹರಿಭಂಕ್ತ್ಯಾ ಗಮಯಿಷ್ಯಾಮಿ ವಾಸರಾನ್ ||

ಎಂಬಂತೆ ಭಗವಂತನಲ್ಲಿ ಸೇವೆಯನ್ನನುಷ್ಠಿಸುತ್ತಿರುತ್ತಾನೆ ಅವನು. 'ಸಪಾದುಕಾಭ್ಯಾಂ ಪ್ರಥಮಂ ನಿವೇದ್ಯ ಚಕಾರ ಪಶ್ಚಾದ್ಭರತೋ ಯಥಾವತ್ |' ಎಂಬಂತೆ ಭರತನ ನಿಷ್ಠೆಯನ್ನನುಸರಿಸುವವನಾಗಿ ನ್ಯಾಯಾರ್ಜಿತ ದ್ರವ್ಯಗಳಿಂದ ಭಗವತ್ಸೇವೆಯಲ್ಲಿ ಮಗ್ನನಾಗುತ್ತಾನೆ ಅವನು. ಬಾಳಬೇಕೆಂಬ ಆಸೆಯುಳ್ಳ ವಧು ಸ್ವಯಂ ಪುರುಷಾರ್ಥವಾಗಿ ಹೇಗೆ ತನ್ನ ಮಂಗಳಸೂತ್ರಗಳನ್ನು ರಕ್ಷಿಸಿಕೊಂಡಿರುವಳೋ ಹಾಗೆಯೇ ಪ್ರಪನ್ನನು ಭಗವಂತನಿಂದ ಮೊದಲ್ಗೊಂಡು ಭಾಗವತ ಪರ್ಯಂತವಾಗಿರುವ ಕೈಂಕರ್ಯವೆಂಬ ಪುರುಷಾರ್ಥವನ್ನು ಸ್ವಯಂ ಪ್ರಯೋಜನವಾಗಿ ನಡೆಸುವನು. ಇದನ್ನೇ ಆಚಾರ್ಯರು ರಹಸ್ಯತ್ರಯ ಸಾರದಲ್ಲಿ

ಮಾಂಗಳ್ಯಸೂತ್ರ ವಸ್ತ್ರಾದೀನ್ ಸಂರಕ್ಷತಿ ಯಥಾ ವಧೂಃ |
ತಥಾ ಪ್ರಪನ್ನಶ್ಯಾಸ್ತ್ರೀಯಪತಿಕೈಂಕರ್ಯ ಪದ್ಧತಿಮ್ ||
ಯದ್ವನ್ಮಾಂಗಳ್ಯ ಸೂತ್ರಾದೇಸ್ತ್ಯಾಗೇ ಸಂರಕ್ಷಣೇಽಪಿವಾ |
ರಕ್ಷೇನ್ನಿರೋಧೈರ್ಭೋಗೈರ್ವಾ ಪತಿಸ್ತದ್ವದಿಹಾ ಪಿನಃ ||

ಎಂದು ನಿರೂಪಿಸಿದ್ದಾರೆ.

ಚೇತನನೊಬ್ಬನು ತನ್ನ ಅದೃಷ್ಟದ ಕಾರಣ ಭಗವಂತನಲ್ಲಿ ಶರಣಾಗತಿ ಮಾಡುವನಷ್ಟೇ ? ಪ್ರಪತ್ತಿಮಾಡುವ ಪೂರ್ವ ಕಾಲದಲ್ಲಿ ಅವನು ಗಳಿಸಿದ್ದ ಪುಣ್ಯಪಾಪಗಳೂ ಪ್ರಪತ್ತ್ಯುತ್ತರ ಕಾಲದಲ್ಲಿ ಗಳಿಸುವ ಪುಣ್ಯಪಾಪಗಳೂ ಫಲ ಕೊಡಲೇಬೇಕಲ್ಲವೇ ಎಂಬ ಸಂದೇಹ ಬರಬಹುದು. ಆದರೆ ಇದಕ್ಕೆ ಇಲ್ಲಿ ಅವಕಾಶವಿಲ್ಲ. ಪ್ರಪನ್ನನು ಅನುಷ್ಠಿಸಿದ ಪ್ರಪತ್ತಿಯಿಂದ ಬ್ರಹ್ಮೋಪಾಸನೆಯಲ್ಲಿ ಹೇಗೆಯೋ ಹಾಗೆ ಅವನ ಸಂಚಿತ ಪುಣ್ಯಪಾಪವೆಲ್ಲಾ ನಾಶವಾಗುವುದು. ಅಷ್ಟೇ ಅಲ್ಲದೆ ಅಭ್ಯುಪಗತವಾದ ಪಾರಬ್ಧ ಕರ್ಮವನ್ನು ಬಿಟ್ಟರೆ ಉಳಿದ ಪ್ರಾರಬ್ಧ ಕರ್ಮವೂ ನಶಿಸುವುದು. 'ಸಾಧ್ಯಭಕ್ತಿಸ್ತು ಸಾ ಹಂತ್ರೀ ಪ್ರಾರಬ್ಧಸ್ಯಾಪಿ ಭೂಯಸೀ' ಎಂದು ಇದನ್ನು ಹೇಳಿದೆ. ಮುಂದೆ ಪ್ರಮಾದಿಕವಾಗಿ ಸಂಭವಿಸುವ ಪುಣ್ಯಪಾಪರೂಪವಾದ ಉತ್ತರಾಘವು ಲೇಪಿಸದು ಹೀಗಾಗಿ ಅವನು ಅನಘನಾಗುತ್ತಾನೆ. 'ತದಧಿಗಮ ಉತ್ತರ ಪೂರ್ವಾಘಯೋರಶ್ಲೇಷ ವಿನಾಶೌ ತದ್ವ್ಯಪದೇಶಾತ್' ಎಂದು ಸೂತ್ರಕಾರರು ಇದನ್ನು ನಿರೂಪಿಸಿದ್ದಾರೆ.

ಪ್ರಪನ್ನನು ಪ್ರಪತ್ತ್ಯುತ್ತರ ಕಾಲದಲ್ಲಿ ಬುದ್ಧಿಪೂರ್ವಕವಾಗಿ ಪಾಪವನ್ನು ಮಾಡುವುದಿಲ್ಲ. ಕರ್ಮವಶದಿಂದ ಹೇಗಾದರೂ ಬುದ್ಧಿಪೂರ್ವಕವಾದ ಪಾಪ ಸಂಭವಿಸಿ ಬಿಟ್ಟರೂ ಪ್ರಪತ್ತಿಗೆ ವಶನಾದ ಪ್ರಭು ಅದನ್ನು ಪ್ರಾಯಶ್ಚಿತ್ತಾದಿಗಳನ್ನು ಮಾಡಿಸಿಯಾಗಲೀ ಹಾಗೆಯೂ ಆಗದಿದ್ದರೆ ಲಘುವಾದ ದಂಡನೆಯನ್ನು ವಿಧಿಸಿಯಾಗಲೀ ಪರಿಹಾರಮಾಡಿ ತನ್ನ ನಿತ್ಯಕೈಂಕರ್ಯವನ್ನು ಕರುಣಿಸುತ್ತಾನೆ. ಮಾಡಿದ ಪ್ರಪತ್ತಿಗೆ ಫಲ ಎಂದೂ ತಪ್ಪುವುದಿಲ್ಲವೆಂಬುದನ್ನು ನಾವು ತಿಳಿಯಬೇಕು. ಪ್ರಪನ್ನನು ಪ್ರಪತ್ತ್ಯುತ್ತರ ಕಾಲದಲ್ಲಿ ತನ್ನ ಶರೀರವಿರುವವರೆಗೂ ಶಾಸ್ತ್ರೀಯ ಪದ್ಧತಿಯನ್ನು ಎಳ್ಳಷ್ಟೂ ಮೀರದೆ ಭಗವಂತನ ಅಜ್ಞಾನುಜ್ಞಾರೂಪವಾದ ಕೈಂಕರ್ಯವನನ್ನುಷ್ಠಿಸಬೇಕು.

ಅವಿಪ್ಲವಾಯ ಧರ್ಮಾಣಾಂ ಪಾಲನಾಯ ಕುಲಸ್ಯ ಚ ।
ಸಂಗ್ರಹಾಯ ಚ ಲೋಕಸ್ಯ ಮರ್ಯಾದಾಸ್ಥಾಪನಾಯ ಚ ॥
ಪ್ರಿಯಾಯ ಮಮವಿಷ್ಣೋಶ್ಚ ದೇವದೇವಸ್ಯ ಶಾಙ್ರ್ಗಿಣಃ ।
ಮನೀಷೀ ವೈದಿಕಾ ಚಾರಂ ಮನಸಾಪಿ ನ ಲಂಘಯೇತ್ ॥

ಎಂಬುವನ್ನು ನಾವು ಅನುಸಂಧಾನ ಮಾಡಬೇಕು ಈ ಭಗವತ್ಕೈಂಕರ್ಯ ಭಾಗವತ ಪರ್ಯಂತವಾಗಬೇಕೆನ್ನುವುದನ್ನು 'ಭಕ್ತೇರ್ಮತೇ ವರಗುಣಾರ್ಣವ ಪಾರತಂತ್ರ್ಯಾತ್ ದಾಸ್ಯಂ ಭಜಂತಿ ವಿಪಣಿ ವ್ಯವಹಾರಯೋಗ್ಯಾ' (ಶ್ಲೋಕ ೩೫) ಎಂದು ಆಚಾರ್ಯರು ವಿವರಿಸಿದ್ದಾರೆ.

ತತ್ತ್ವಹಿತ ಪುರುಷಾರ್ಥಗಳಲ್ಲಿ ನಿಷ್ಠೆಯನ್ನುಳ್ಳ ಪ್ರಪನ್ನನ ಸ್ವಭಾವ ಹೇಗಿರುವುದೆಂಬುದನ್ನು ತೋರಿಸುವ ಲಕ್ಷಣಗಳು ಕೆಲವಿವೆ. ತನಗೆ ಸ್ವರೂಪದಲ್ಲಿ ನಿಷ್ಠೆ ಇದೆ ಎಂಬುದನ್ನು ತಿಳಿಯಲು ಕೆಳಗಿನ ಗುರುತುಗಳಿರಬೇಕು.

೧) ಇತರರು ತನ್ನನ್ನು ನಿಂದಿಸಿ ಅಪಮಾನಗೊಳಿಸಿದರೆ ದೇಹಾತ್ಮವಿವೇಕದಿಂದ ಅದು ತನಗೆ ಸಂಬಂಧಿಸುವುದಿಲ್ಲವೆಂದು ತಿಳಿದು ವಿಷಾದ ಬಿಡಬೇಕು.

೨) ತನ್ನನ್ನು ಪರಿಭವಿಸಿ ಅವರು ಪಾಪಕ್ಕೆ ಗುರಿಯಾಗುವರಲ್ಲಾ ಎಂದು ಅವರಲ್ಲಿ ಮರುಕ ತೋರಬೇಕು.

೩) ತನ್ನಲ್ಲಿರುವ ತಪ್ಪುಗಳನ್ನು ಅವರು ನೆನಪಿಗೆ ತಂದುಕೊಟ್ಟರೆಂದು ಅವರಲ್ಲಿ ಕೃತಜ್ಞತೆ ತೋರಬೇಕು.

೪) ಕರ್ಮಾನುಗುಣವಾಗಿ ಭಗವಂತನ ಪ್ರೇರಣೆಯಂತೆ ಅವರು ಹಾಗೆ ವರ್ತಿಸಿದ್ದಾರೆಂದು ತಿಳಿದು ನಿರ್ವಿಕಾರಚಿತ್ತತೆಯಿಂದಿರಬೇಕು.

೫) ಇದರಿಂದ ತನ್ನ ಪ್ರಾರಬ್ಧಕರ್ಮವು ಕಳೆದುಹೋಗುತ್ತಿದೆಯೆಂದು ತಿಳಿದು ಸಂತೋಷಿಸಬೇಕು.

ಈ ಲಕ್ಷಣಗಳೆಲ್ಲಾ ಯಾರಲ್ಲಿವೆಯೋ ಆತನಿಗೆ ಸ್ವರೂಪನಿಷ್ಠೆ ಇದೆ ಎಂಬುದು ನಿಶ್ಚಿತ. ತನಗೆ ಉಪಾಯ ನಿಷ್ಠೆ ಇದೆಯೆಂದು ತೋರಿಸುವ ಲಕ್ಷಣಗಳು ಹೀಗಿವೆ.–

೧) ಸರ್ವೇಶ್ವರನನ್ನು ಬಿಟ್ಟು ತನಗೆ ಬೇರೆ ಯಾರೂ ಹಿತತಮರಲ್ಲವೆಂಬ ನಂಬಿಕೆ ಇರಬೇಕು.

೨) ಮರಣವೇ ಸಂಭವಿಸುವಂಥ ಭಯ ಕಾರಣಗಳುಂಟಾದರೂ ಭಯಪಡದಿರಬೇಕು.

೩) ಮೋಕ್ಷವು ಸಮೀಪಿಸುತ್ತಿದೆಯೆಂದು ಅಂಥ ಸಂದರ್ಭಗಳಲ್ಲಿ ಸಂತೋಷಪಡಬೇಕು.

೪) ಭಗವಂತನಲ್ಲಿ ಶರಣಾಗತಿ ಮಾಡಿರುವ ವಿಚಾರದಲ್ಲಿ ಸ್ವಪ್ರಯತ್ನವನ್ನು ಬಿಟ್ಟುಬಿಟ್ಟಿರಬೇಕು.

೫) ಇಷ್ಟಪ್ರಾಪ್ತಿಯೂ ಅನಿಷ್ಟನಿವೃತ್ತಿಯೂ ಭಗವಂತನಿಗೆ ಸೇರಿದುದೆಂದು ನಿರ್ಭರರೂ ನಿರ್ಭಯರೂ ಆಗಬೇಕು.

ತನ್ನಲ್ಲಿ ಪುರುಷಾರ್ಥನಿಷ್ಠೆ ಇದೆ ಎಂಬುದನ್ನು ತೋರಿಸುವ ಗುರುತುಗಳು ಕೆಳಗೆಕಂಡಂತೆ ಇವೆ.–

೧) ಪ್ರಾರಬ್ಧಕರ್ಮಕ್ಕನುಗುಣವಾಗಿ ಸಾಗುವ ದೇಹಯಾತ್ರೆಯ ವಿಚಾರದಲ್ಲಿ ಅನಾಸಕ್ತಿಯಿಂದಿರಬೇಕು.

೨) ಈಶ್ವರ ಸಂಕಲ್ಪವಿಲ್ಲದೆ ಯಾವುದೂ ನಡೆಯುವುದಿಲ್ಲವೆಂಬ ದೃಢವಿಶ್ವಾಸವಿರಬೇಕು.

೩) ಶಾಸ್ತ್ರಕ್ಕೆ ವಿರೋಧವಿಲ್ಲದವೂ, ಭಗವತ್ಸಂಕಲ್ಪದಿಂದ ಪ್ರಾಪ್ತವಾದವೂ ಆದ ವಿಷಯಗಳನ್ನು ಅನಾಸಕ್ತಿಯಿಂದ ಅನುಭವಿಸುವುದು.

೪) ಐಹಿಕಾಭಿವೃದ್ಧಿ ಹಾಗೂ ಐಹಿಕ ಹಾನಿಗಳಲ್ಲಿ ಸಂತೋಷವನ್ನಾಗಲೀ, ದುಃಖವನ್ನಾಗಲೀ ಹೊಂದದಿರುವುದು.

೫) ತನ್ನ ಸ್ವರೂಪಕ್ಕನುರೂಪವಾದ ಕೈಂಕರ್ಯದಲ್ಲಿ ರುಚಿಯನ್ನೂ, ತ್ವರೆಯನ್ನೂ ಹೊಂದಿರುವುದು.

ಹೀಗೆ ಮೇಲೆ ಹೇಳಿರುವ ಈ ಲಕ್ಷಣಗಳಿಂದ ನಮ್ಮಲ್ಲಿ ಸ್ವರೂಪ, ಹಿತ ಪುರುಷಾರ್ಥಗಳಲ್ಲಿ ನಿಷ್ಠೆ ಇದೆ ಎಂಬುದನ್ನು ಅರಿಯಬಹುದೆಂದು ಆಚಾರ್ಯರು ರಹಸ್ಯತ್ರಯಸಾರದಲ್ಲಿ ವಿವರಿಸಿದ್ದಾರೆ.

## ಪುರುಷಾರ್ಥ ಪ್ರಾಪ್ತಿ

ಹೀಗೆ ಭಗವಂತನಲ್ಲಿ ಅನನ್ಯಭಾವದಿಂದ ಶರಣುಹೋದ ಪ್ರಪನ್ನನು ಇಲ್ಲಿರುವಾಗಲೇ ಮುಂದೆ ತನಗೆ ಲಭಿಸುವ ಮಹದಾನಂದದಲ್ಲಿ ಪಾಲುಗೊಳ್ಳುವನು. ಭಗವಂತನ ಕೈಂಕರ್ಯವನ್ನು ಸರ್ವಭಾವದಿಂದ ಈಗಿನಿಂದಲೇ ಮಾಡುವವನಾಗಿ ಪರಿಶುದ್ಧವಾದ ಜೀವನವನ್ನು ನಡೆಸುತ್ತಾ ಭಗವತ್ಪ್ರಾಪ್ತಿಯನ್ನೇ ನಿರೀಕ್ಷಿಸುತ್ತಿರುತ್ತಾನೆ ಅವನು. ಭಗವಂತನು ಸಂಕಲ್ಪಿಸಿರುವ ಆಯುಸ್ಸನ್ನು ಮುಗಿಸಿ ಭಗವಂತನ ದಯೆಯಿಂದ ಅಂತ್ಯಕಾಲದಲ್ಲಿ ಭಗವಂತನ ನಾಮಸ್ಮರಣೆಯನ್ನು ಮಾಡುತ್ತಾ ಅವನಿಂದ ದಾರಿತೋರಲ್ಪಟ್ಟವನಾಗಿ ಮೂರ್ಧನ್ಯನಾಡಿಯಲ್ಲಿ ಪ್ರವೇಶಿಸಿ ದೇಹದಿಂದ ಹೊರಬಂದು ಅರ್ಚಿರಾದಿ ಮಾರ್ಗದಲ್ಲಿ ಆತಿವಾಹಿಕರಿಂದ ಸತ್ಕರಿಸಲ್ಪಡುವವನಾಗಿ ಪರಬ್ರಹ್ಮವಸ್ತುವನ್ನು ಸೇರಿ ಪರಮಾತ್ಮಸಾಯುಜ್ಯವನ್ನು ಹೊಂದುತ್ತಾನೆ.

' ಏವಮೇವೈಷ ಸಂಪ್ರಸಾದಃ ಅಸ್ಮಾಚ್ಛರೀರಾತ್ ಸಮುತ್ಥಾಯ ಪರಂ ಜ್ಯೋತಿರುಪಸಂ ಪದ್ಯ ಸ್ವೇನರೂಪೇಣಾಭಿನಿಸ್ಪದ್ಯತೇ ' ಎಂಬ ಶ್ರುತಿಗನುಸಾರ

ವಾಗಿ ಅರ್ಚಿರಾದಿ ಮಾರ್ಗದಲ್ಲಿ ಬಂದು ಪರಮಪುರುಷನನ್ನು ಸೇರಿದಾಗ ಜೀವನು ತನ್ನ ನಿಜ ಸ್ವರೂಪದಿಂದ ಪ್ರಕಾಶಿಸುತ್ತಾನೆ. ' ಸಂಪದ್ಯಾವಿರ್ಭಾವಃ ಸ್ವೇನ ಶಬ್ದಾತ್ ' ಎಂದು ಸೂತ್ರದಲ್ಲಿ ಇವನ್ನು ಪ್ರತಿಪಾದಿಸಿದೆ. ' ಸ್ವಸ್ವರೂಪವು ಸದಾ ಸಿದ್ಧವಾದುದೇ ಅಲ್ಲವೇ ? ಅದು ಹೊಸದಾಗಿ ಆವಿರ್ಭವಿಸತಕ್ಕುದಲ್ಲವಲ್ಲ ' ಎಂಬ ಆಶಂಕೆಗೆ ' ಮುಕ್ತಃ ಪ್ರತಿಜ್ಞಾನಾತ್ ' ಎಂಬ ಸೂತ್ರದಿಂದ ಸಮಾಧಾನ ಮಾಡಿದೆ. ಕರ್ಮ ಸಂಬಂಧದಿಂದ ಬಂದಿದ್ದ ಶರೀರದಿಂದ ಮುಕ್ತನಾಗಿ ತನ್ನ ಸ್ವಾಭಾವಿಕರೂಪದಿಂದ ಇರುವ ಜೀವನನ್ನು " ಸ್ವರೂಪಾವಿರ್ಭಾವವನ್ನು ಹೊಂದಿದವನು " ಎಂದು ಹೇಳಿದೆ. ಅವನ ನಿಜಸ್ವರೂಪವು ಅದುವರೆಗೂ ಕರ್ಮ ರೂಪವಾದ ಅವಿದ್ಯೆಯಿಂದ ಮುಚ್ಚಲ್ಪಟ್ಟಿದ್ದಿತು. ಬ್ರಹ್ಮಪ್ರಾಪ್ತಿಯಾದಾಗ ಅದು ನಿವೃತ್ತಿಯಾಯಿತು ಹೀಗೆ ಸ್ವಸ್ವರೂಪಾವಿರ್ಭಾವ. ಇಂಥ ಜೀವನಿಗೆ ಅಪಹತ ಪಾಪ್ಮತ್ವಾದಿ ಎಂಟು ಗುಣಗಳೂ ಸ್ವರೂಪತಃ ಇರುತ್ತಿದ್ದರೂ ಸಂಸಾರದಶೆಯಲ್ಲಿ ಕರ್ಮದಿಂದ ಮರೆಯಾಗಿದ್ದು ಮುಕ್ತಾವಸ್ಥೆಯಲ್ಲಿ ವಿಶದವಾಗಿ ಪ್ರಕಾಶಿಸುತ್ತವೆ. ಆದುದರಿಂದ–

ಯಥಾ ನ ಕ್ರಿಯತೇ ಜ್ಯೋತ್ಸ್ನಾ ಮಲಪ್ರಕ್ಷಾಲನಾನ್ಮಣೇಃ ।
ದೋಷಪ್ರಹಾಣಾನ್ನ ಜ್ಞಾನಮಾತ್ಮನಃ ಕ್ರಿಯತೇ ತಥಾ ॥

ಎಂದು ವಿವರಿಸಿರುವಂತೆ ಇವುಗಳು ಹೊಸದಾಗಿ ಉಂಟಾದವಲ್ಲ; ಆದರೆ ಆವಿರ್ಭಾವ ಹೊಂದಿದವು. ಇದನ್ನೇ ಆಚಾರ್ಯರು " ಆವಿರ್ಭವತ್ಯಯುತ ಸಿದ್ಧ ನಿಜಸ್ವರೂಪೇ " (ಶ್ಲೋಕ ೪೦) ಎಂದು ಈ ಸ್ತೋತ್ರದಲ್ಲಿ ಅನುಸಂಧಾನ ಮಾಡಿದ್ದಾರೆ.

ಗುಣಾಷ್ಟಕಗಳ ಆವಿರ್ಭಾವವಾದ ಮುಕ್ತನ ಅನುಭವ ಪ್ರಕಾರವನ್ನು " ಸೋಽಶ್ನುತೇ ಸರ್ವಾನ್ ಕಾಮಾನ್‌ಸಹ ಬ್ರಹ್ಮಣಾವಿಪಶ್ಚಿತಾ ", " ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ ", " ಮಮ ಸಾಧರ್ಮ್ಯ ಮಾಗತಾಃ " ಎಂಬ ಪ್ರಮಾಣಗಳು ನಿರೂಪಿಸುತ್ತವೆ. ಸೂತ್ರಕಾರರು ' ಅವಿಭಾಗೇನ ದೃಷ್ಟತ್ವಾತ್ ' ಎಂಬ ಸೂತ್ರದಲ್ಲಿ ಇದನ್ನು ಪ್ರತಿಪಾದಿಸಿದ್ದಾರೆ. ಅವಿದ್ಯೆಯ ಗಂಧವೂ ಇಲ್ಲದವನಾಗಿ ಯಥಾರ್ಥ ಜ್ಞಾನ ವುಳ್ಳ ಮುಕ್ತನು ತಾನು ಬ್ರಹ್ಮಪ್ರಕಾರವೆಂಬುದನ್ನೂ ಪರಮ ಪುರುಷನು ಸರ್ವ

ಪ್ರಕಾರಕನೆಂಬುದನ್ನೂ ಸಾಕ್ಷಾತ್ಕಾರಿಸಿಕೊಂಡುವನಾಗಿ ತಾನು ಪರಮಾತ್ಮನನ್ನು ಆತ್ಮನನ್ನಾಗಿ ಹೊಂದಿರುವುದಾಗಿ 'ಬ್ರಹ್ಮಾಸ್ಮಿ' ಎಂದರೆ "ಬ್ರಹ್ಮಾತ್ಮಕನಾಗಿದ್ದೇನೆ" ಎಂದು ಅನುಭವಿಸುತ್ತಾನೆ. ಪರಮಪುರುಷನಿಗೆ ಸಮನಾದ ಆನಂದಾನುಭವವನ್ನು ತಾನೂ ಹೊಂದುತ್ತಾನೆ. ಪರಮಾತ್ಮನಿಗೆ ಶೇಷನಾದ ಜೀವನು ಪರಮಪುರುಷನಿಗೆ ಅಸಾಧಾರಣವಾದ ಸರ್ವೇಶ್ವರತ್ವವನ್ನೂ, ಜಗದೀಶ್ವರತ್ವವನ್ನೂ ಬಿಟ್ಟು ಇತರ ಅಂಶಗಳಲ್ಲಿ ಭಗವಂತನಿಗೆ ಸಮನಾಗುತ್ತಾನೆ. "ಜಗದ್ವ್ಯಾಪಾರವರ್ಜಂ ಪ್ರಕರಣಾತ್ ಅಸನ್ನಿಹಿತತ್ವಾಚ್ಚ" ಎಂದು ಸೂತ್ರಕಾರರು ಇದನ್ನೇ ಸಮರ್ಥಿಸಿದ್ದಾರೆ "ಭೋಗಮಾತ್ರ ಸಾಮ್ಯ ಲಿಂಗಾಚ್ಚ" ಎಂಬ ಸೂತ್ರದಲ್ಲಿ ಬ್ರಹ್ಮವಸ್ತುವಿನ ಯಾಥಾತ್ಮ್ಯಾನುಭವರೂಪವಾದ ಭೋಗಮಾತ್ರದಲ್ಲಿ ಮುಕ್ತನಿಗೂ ಪರಬ್ರಹ್ಮವಸ್ತುವಿಗೂ ಸಾಮ್ಯವೆಂದು ಹೇಳಿದೆ. ಆಚಾರ್ಯರು "ತ್ವಲ್ಲಕ್ಷಣೇಷು ನಿಯತೇಷ್ವಪಿ ಭೋಗಮಾತ್ರೇ ಸಾಮ್ಯಂಭಜಂತಿ ಪರಮಂ ಭವತಾ ವಿಮುಕ್ತಾಃ" (ಶ್ಲೋ ೯ ೪೦) ಎಂದು ಇವೆಲ್ಲವನ್ನೂ ಇಲ್ಲಿ ಅನುಸಂಧಾನಮಾಡಿದ್ದಾರೆ. ಹೀಗೆ ಚೇತನನು ಭಗವಂತನಲ್ಲಿ ಅನನ್ಯಭಾವದಿಂದ ಪ್ರಪತ್ತಿಯನ್ನನುಷ್ಠಿಸಿ ತನಗೆ ಪ್ರಾಪ್ಯವಾದ ಭಗವಂತನ ನಿತ್ಯಕೈಂಕರ್ಯವನ್ನು ಪಡೆದುಕೊಂಡು ಧನ್ಯನಾಗುತ್ತಾನೆ.

* * * *

ನಮಗೆ ಪರಮಪ್ರಾಪ್ಯನಾದ ಭಗವಂತನ ಸ್ವರೂಪವನ್ನೂ ಅವನನ್ನು ಪಡೆಯಲು ಅನುಷ್ಠಿಸಬೇಕಾದ ಸಾಧ್ಯೋಪಾಯ ಸ್ವರೂಪವನ್ನೂ, ಅದರಿಂದ ನಮಗೆ ಲಭ್ಯವಾಗುವ ಪ್ರಾಪ್ತಿಯನ್ನೂ ನಿರೂಪಿಸಿದ ನಂತರ ಆಚಾರ್ಯರು ಈ ಸ್ತೋತ್ರದ ಉಳಿದ ಭಾಗದಿಂದ ಪ್ರಪನ್ನರು ಪ್ರಪತ್ತ್ಯುತ್ತರಕಾಲದಲ್ಲಿ ದಿನದಿನವೂ ಹೇಗೆ ಭಗವದ್ದಯೆಯನ್ನು ಬೇಡಬೇಕೆಂಬುದನ್ನು ತೋರಿದ್ದಾರೆ. ಆತನಲ್ಲಿ ಪ್ರಣತರಾದ ನಮ್ಮ ರಕ್ಷಣೆ ಅವನ ಹೊಣೆಯೇ ಆಗಿದೆ ಎಂಬುದನ್ನು ವಿಧವಿಧವಾಗಿ ಅನುಸಂಧಾನ ಮಾಡಿದ್ದಾರೆ.

ಹೀಗೆ ಈ ಸ್ತೋತ್ರ ಭಗವಂತನ ಸ್ವರೂಪರೂಪ ಗುಣಗಳನ್ನು ಕೊಂಡಾಡುತ್ತಾ ತತ್ತ್ವ-ಹಿತ-ಪುರುಷಾರ್ಥಗಳನ್ನೂ ಬೋಧಿಸುತ್ತದೆ ಶ್ರೀಮದ್ರಹಸ್ಯತ್ರಯಸಾರದ ಸಾರಾರ್ಥವನ್ನೊಳಗೊಂಡಿದೆ. ಹಾಗೆಯೇ ಉಪೇಯೋಪಾಯ

ಸ್ವರೂಪಗಳನ್ನು ವಿವರಿಸುವ ಬ್ರಹ್ಮಸೂತ್ರಗಳ ಸಂಗ್ರಹವೂ ಆಗಿದೆ. ಭಗವದ್ಯಾಮುನರ ಸ್ತೋತ್ರ ರತ್ನದ ಮಾದರಿಯಲ್ಲಿ 'ರಸಸ್ವರೂಪ'ನಾದ ಭಗವಂತನನ್ನು ಒಲಿಸುವ ಸುಂದರಸ್ತೋತ್ರವಾಗಿದೆ. ಹಾಗೂ ಶರಣಾಗತಿ ಸಿದ್ಧಾಂತವನ್ನು ಪ್ರಕಾರ ವಿಶೇಷಗಳೊಡನೆ ಪ್ರಕಾಶಗೊಳಿಸುವ ರತ್ನದೀಪವಾಗಿದೆ.

* * * *

ಈ ಪ್ರಪತ್ತಿ ಸಿದ್ಧಾಂತ ಶ್ರೀವೈಷ್ಣವರಿಗೇ ವಿಶೇಷವಾದ ಸಿದ್ಧಾಂತವಲ್ಲ. ಇದು ಎಲ್ಲ ಸಾಧಕರಿಗೂ ಒಂದಲ್ಲ ಒಂದು ಮಟ್ಟದಲ್ಲಿ ಆವಶ್ಯಕವೇ ಆಗಿದೆ. ಈಶ್ವರವಾದಿಗಳಾದ ಕ್ರೈಸ್ತರೂ, ಮುಹಮ್ಮದೀಯರೂ ಈಶ್ವರಶರಣತೆಯನ್ನೇ ನಂಬಿದ್ದಾರೆ. ಬೌದ್ಧರೂ, ಜೈನರೂ ಬುದ್ಧನಲ್ಲಿ ಅಥವಾ ತೀರ್ಥಂಕರರಲ್ಲಿ ಶರಣು ಹೋಗಬೇಕೆನ್ನುತ್ತಾರೆ. ವೇದಾಂತದ ಇತರ ಉಪಶಾಖೆಗಳಾದ ಅದ್ವೈತ, ದ್ವೈತ ಶಕ್ತಿವಿಶಿಷ್ಟಾದ್ವೈತಗಳವರೂ ಪ್ರಪತ್ತಿಯನ್ನು ಮಾನ್ಯಮಾಡುತ್ತಾರೆ. ಪೂಜ್ಯರಾದ ಶಂಕರಭಗವತ್ಪಾದರು "ನಾರಾಯಣ ಕರುಣಾಮಯ ಶರಣಂ ಕರವಾಣಿ ತಾವಕೌ ಚರಣೌ" ಎಂದು ದ್ವಯಮಂತ್ರಾನುಸಂಧಾನವನ್ನೇ ಮಾಡಿದ್ದಾರೆ. ಶ್ರೀಮಧುಸೂಧನ ಸರಸ್ವತಿಗಳು "ಸರ್ವೇಷಾಂ ತು ಶಾಸ್ತ್ರಾಣಾಂ ಪರಮಂ ರಹಸ್ಯಂ ಈಶ್ವರ ಶರಣತಾ ಏವೇತಿ ತತ್ರೈವ ಶಾಸ್ತ್ರಪರಿಸಮಾಪ್ತಿಃ ಭಗವತಾ ಕೃತಾ" ಎಂದು ತಮ್ಮ ಗೀತಾಭಾಷ್ಯದಲ್ಲಿ ಉದ್ಘೋಷಿಸಿದ್ದಾರೆ. ದ್ವೈತಸಿದ್ಧಾಂತ ಸ್ಥಾಪನಾಚಾರ್ಯರಾದ ಶ್ರೀಮನ್ಮಧ್ವಾಚಾರ್ಯರು "ಶರಣಾಗತಿರೇಷಾಸ್ಯಾತ್ ವಿಷ್ಣೋರ್ಮೋಕ್ಷಫಲಪ್ರದಾ" ಎಂದು ಸಾರಿ ಹೇಳಿ ಶರಣಾಗತಿಯ ಮಹತ್ತ್ವವನ್ನು ತೋರಿದ್ದಾರೆ. ಶಕ್ತಿವಿಶಿಷ್ಟಾದ್ವೈತಿಗಳು ಷಟ್‌ಸ್ಥಲದಲ್ಲಿ ಐದನೆಯ ಸ್ಥಲವನ್ನು ಶರಣಸ್ಥಲವೆಂದೇ ಕರೆದಿದ್ದಾರೆ. ಹೀಗೆ ಶರಣಾಗತಿ ಎಲ್ಲ ದಾರ್ಶನಿಕರೂ ಅಂಗೀಕರಿಸುವ ಸಿದ್ಧಾಂತ. ಇವರೆಲ್ಲರೂ ತಮ್ಮ ತಮ್ಮ ಸಾಧನೆಯನ್ನು ಶರಣಾಗತಿಯಿಂದ ಪರಿಪಕ್ವಗೊಳಿಸಿಕೊಳ್ಳುತ್ತಾರೆ. ತಾವು ತಾವು ಮೋಕ್ಷೋಪಾಯವೆಂದು ಅಂಗೀಕರಿಸಿರುವ ಸಾಧನೆಗಳನ್ನು ಪರಿಪಕ್ವಗೊಳಿಸಲು ಶರಣಾಗತಿಯು ಅತ್ಯಾವಶ್ಯಕವೆಂದು ಇವರು ಒಪ್ಪುತ್ತಾರೆ. ಶರಣಾಗತಿಯು ಇತರ ಸಾಧನೆಗಳನ್ನು ಪೂರ್ಣಗೊಳಿಸುವಂತೆ ನೇರವಾಗಿಯೂ ಮೋಕ್ಷಕ್ಕೆ ಸಾಧನವಾಗುವುದೆಂಬುದು ವಿಶಿಷ್ಟಾದ್ವೈತಿಗಳ ಅನುಭವವಾಗಿದೆ. ಅದಕ್ಕನುಸಾರವಾಗಿ ಪ್ರಪತ್ತಿಯನ್ನು ಮೋಕ್ಷೋಪಾಯವಾಗಿ ಅನಾದಿಕಾಲದಿಂದ ಇವರು ಅನುಷ್ಠಿಸುತ್ತಾ ಬಂದಿದ್ದಾರೆ.

ಮೂಲಕವೂ ಮುಕ್ತಾವಸ್ಥೆಯಲ್ಲಿ ಪ್ರತ್ಯಕ್ಷದಿಂದಲೂ ಭಗವಂತನ ಅಭಿಪ್ರಾಯವನ್ನು ತಿಳಿದು ಅದಕ್ಕೆ ಅನುರೂಪವಾಗಿ ವರ್ತಿಸುವುದು ಇವನ ಸ್ವರೂಪ. ಭಗವಂತನ ಅಭಿಪ್ರಾಯವನ್ನು ಪರೀಕ್ಷಿಸಿ ನೋಡಿದಲ್ಲಿ ಭಾವಗತ ಕೈಂಕರ್ಯವೇ ಅವನಿಗೆ ಎಲ್ಲಕ್ಕಿಂತಲೂ ಹೆಚ್ಚು ಅಭಿಮತವೆಂಬುದು ಸಿದ್ಧವಾಗುತ್ತದೆ. 'ಮಮ ಮದ್ಭಕ್ತ ಭಕ್ತೇಷು ಪ್ರೀತಿರಭ್ಯಧಿಕಾ ಭವೇತ್ । ತಸ್ಮಾನ್ಮದ್ಭಕ್ತ ಭಕ್ತಾಶ್ಚ ಪೂಜನೀಯಾ ವಿಶೇಷತಃ ॥ ಎಂದೂ 'ಮದ್ಭಕ್ತಜನವಾತ್ಸಲ್ಯಂ' ಎಂದೂ' ಅನನ್ಯದೇವತಾ ಭಕ್ತಾಃ ಯೇ ಮದ್ಭಕ್ತಜನಪ್ರಿಯಾಃ। ಮಾಮೇವ ಶರಣಂ ಪ್ರಾಪ್ತಾಃ ತೇ ಮದ್ಭಕ್ತಾಃ ಪ್ರಕೀರ್ತಿತಾಃ ॥ ಎಂದೂ ಹೇಳಿರುವಂತೆ ಭಗವದ್ಭಕ್ತರಲ್ಲಿ ಭಕ್ತಿಮಾಡುವವನು ಭಗವಂತನಿಗೆ ಪ್ರಿಯತಮನಾಗುತ್ತಾನೆ. 'ಜ್ಞಾನೀತ್ವಾತ್ಮೈವ ಮೇ ಮತಂ' ಎಂದು ಭಗವಂತ ಭಕ್ತರನ್ನು ಸನ್ಮಾನಿಸುವಂತೆ ಭಕ್ತರ ಭಕ್ತರನ್ನೂ ಸನ್ಮಾನಿಸುತ್ತಾನೆ. ಈ ಭಾಗವತಶೇಷತ್ವ ಭಗವದಿಷ್ಟಸಿದ್ಧವಾಗಿಯೂ ಬರುತ್ತದೆ. ಹಾಗೆಯೇ 'ಗುಣೈರ್ದಾಸ್ಯಮುಪಾಗತಃ' ಎಂಬಂತೆ ಗುಣಜ್ಞಾನದ ಕಾರಣ ತಮ್ಮ ತಮ್ಮ ಇಷ್ಟಕ್ಕನುಗುಣವಾಗಿಯೂ ಸಿದ್ಧವಾಗುತ್ತದೆ. ಈ ಬಗೆಯ ಭಾಗವತಶೇಷತ್ವದಿಂದ ಪರಮೈಕಾಂತಿತ್ವಕ್ಕೆ ಭಂಗಬರುವುದಿಲ್ಲವೇ ಎಂಬ ಆಕ್ಷೇಪ ಸಲ್ಲದು. ಏಕೆಂದರೆ ಇದು ಪರಮೈಕಾಂತಿತ್ವಕ್ಕೆ ಉಚಿತವಾದ ಪತಿಚಿತ್ತಾನುವರ್ತನವಾಗಿದೆ. ಭಗವಂತನಿಗೆ ತಾನು ಶೇಷಭೂತನೆಂಬ ಜ್ಞಾನದಿಂದ ಬರುವ ಈ ಭಾಗವತಶೇಷತ್ವಕ್ಕೆ ಯಾವ ಬಗೆಯ ಕ್ಷುದ್ರಪ್ರಯೋಜನಾಂತರವೂ ಇರುವುದಿಲ್ಲ. ಈ ಭಾಗವತ ಶೇಷತ್ವ ಮುಕ್ತಾವಸ್ಥೆಯಲ್ಲಿಯೂ ಇರುವ ಕಾರಣ ಸ್ವಾಭಾವಿಕವಾದುದು. ಭಗವಂತನ ಸಂಬಂಧಜ್ಞಾನವಿಶೇಷಣ ಕಾರಣವುಂಟಾಗುವುದರಿಂದ ಔಪಾಧಿಕವೂ ಆಗುತ್ತದೆ. ಭಾಗವತರೊಬ್ಬರಿಗೊಬ್ಬರು ಪರಸ್ಪರ ಶೇಷಭೂತರು ಆಗಿ ಶೇಷಿಗಳೂ ಆಗುವುದರಲ್ಲಿ ಬಾಧಕವೇ ಇಲ್ಲ. ಭಗವಂತನು ತನ್ನ ಸ್ವತಂತ್ರೇಚ್ಛೆಯಿಂದ ಎಲ್ಲ ಭಾಗವತರಿಗೂ ಶೇಷಿತ್ವವನ್ನುಂಟುಮಾಡಿದ್ದಾನೆ. ಎಲ್ಲ ಚೇತನರೂ ಸ್ವಾಮಿಯಾದ ಭಗವಂತನಿಗೆ ಅವನಿಗೆ ಇಷ್ಟಬಂದಂತೆ ಬಳಸಿಕೊಳ್ಳಲು ಅರ್ಹರಾಗಿದ್ದಾರೆ. ಆದ್ದರಿಂದ ಅವನ ಇಚ್ಛೆಯಂತೆ ಶೇಷಿತ್ವವೂ ಶೇಷತ್ವವೂ ಅವನಿಗೆ ಉಂಟಾಗುವುದು. ಭಾಗವತಶೇಷತ್ವವೂ ಭಾಗವತ ಕೈಂಕರ್ಯವೂ ಹೀಗೆ ಇವರಿಗೆ ಪುರುಷಾರ್ಥದ ಪರಮಕಾಷ್ಠೆ

|| ಶ್ರೀಃ ||

# ಶರಣಾಗತಿದೀಪಿಕಾ

ಶ್ರೀಮಾನ್ವೇಂಕಟನಾಥಾರ್ಯಃ ಕವಿತಾರ್ಕಿಕಕೇಸರೀ ।
ವೇದಾಂತಾಚಾರ್ಯವರ್ಯೋ ಮೇ ಸನ್ನಿಧತ್ತಾಂ ಸದಾ ಹೃದಿ ॥

**ಪದ್ಮಾಪತೇಃ ಸ್ತುತಿಪದೇನ ವಿಪಚ್ಯಮಾನಂ**
**ಪಶ್ಯಂತ್ವಿಹ ಪ್ರಪದನಪ್ರವಣಾ ಮಹಾಂತಃ ।**
**ಮದ್ವಾಕ್ಯಸಂವಲಿತಮಪ್ಯಜಹತ್ಸ್ವಭಾವಂ**
**ಮಾನ್ಯಂ ಯತೀಶ್ವರಮಹಾನಸಸಂಪ್ರದಾಯಮ್ ॥೧॥**

(ಪದ್ಮಾಪತೇಃ) ಶ್ರೀಮನ್ನಾರಾಯಣನ (ಸ್ತುತಿಪದೇನ) ಸ್ತೋತ್ರದ ರೂಪದಲ್ಲಿ (ವಿಪಚ್ಯಮಾನಂ) ಪಕ್ವವಾಗುತ್ತಿರುವುದೂ, (ಮದ್ವಾಕ್ಯ ಸಂವಲಿತಮಪಿ) ನನ್ನ ಮಾತುಗಳಿಂದ ಆವೃತವಾಗಿದ್ದರೂ, (ಅಜಹ ತ್ಸ್ವಭಾವಂ) ತನ್ನ ಸ್ವಭಾವವನ್ನು ಬಿಡದಿರುವುದೂ, (ಮಾನ್ಯಂ) ಎಲ್ಲರಿಗೂ ಉತ್ತಾರಕವಾಗಿ ಪೂಜ್ಯವಾದುದೂ ಆದ (ಯತೀಶ್ವರಮಹಾನಸಸಂಪ್ರ ದಾಯಮ್) ಭಗವದ್ರಾಮಾನುಜರ ಪಾಕಶಾಲೆಯ ಸಂಪ್ರದಾಯವನ್ನು (ಪ್ರಪದನಪ್ರವಣಾಃ) ಪ್ರಪತ್ತಿನಿಷ್ಠರಾದ (ಮಹಾಂತಃ) ಮಹಾತ್ಮರು (ಇಹ) ಇಲ್ಲಿ (ಪಶ್ಯಂತು) ಕಾಣಲಿ.

ಭಗವದ್ರಾಮಾನುಜರಿಗೆ ಬಹಳ ಹೃದ್ಯತಮವಾದ ಶರಣಾಗತಿ ಸಂಪ್ರದಾಯ ಈ ಸ್ತೋತ್ರದ ವಿಷಯವೆಂದು ಆಚಾರ್ಯರು ಇಲ್ಲಿ ನಿರೂಪಿಸುತ್ತಿದ್ದಾರೆ. ಭಗವದ್ರಾಮಾನುಜರಿಗೆ ಮಧುಕರ ಕೈಂಕರ್ಯ ಮಾಡುತ್ತಿದ್ದ ಅವರ ಪ್ರಿಯಶಿಷ್ಯರಾದ ಪ್ರಣತಾರ್ತಿಹರರು (ಕಿಡಾಂಬಿ ಆಚ್ಚಾನ್) ತಾವು ಪಡೆದುಕೊಂಡ ರಹಸ್ಯಾರ್ಥಗಳನ್ನೂ ಮಂತ್ರಾರ್ಥಸಂಪ್ರದಾಯವನ್ನೂ ತಮ್ಮ ಶಿಷ್ಯರಿಗೆ ಉಪದೇಶಿಸಿದರು. ಮುಂದೆ ಶ್ರೀವಾತ್ಸ್ಯ ರಾಮಾನುಜರು ಆ ರಹಸ್ಯಾರ್ಥಗಳನ್ನು ಪಡೆದುಕೊಂಡು ತಮ್ಮ ಸೋದರಳಿಯಂದಿರಾದ ಶ್ರೀಮದ್ವೇಂಕಟನಾಥರಿಗೆ ಉಪದೇಶಿಸಿದರು. ಹೀಗೆ ವಿಶ್ವಸನೀಯವೂ,

ಅಪ್ತತಮವೂ ಆದ ಪರಂಪರೆಯಿಂದ ಲಭಿಸಿದ ರಹಸ್ಯಾರ್ಥಗಳಿವು ಎಂಬುದನ್ನು 'ಮಹಾನಸಸಂಪ್ರದಾಯ' ಎಂದು ಉಲ್ಲೇಖಿಸಿದ್ದಾರೆ.

ನಿತ್ಯಂ ಶ್ರಿಯೊ ವಸುಧಯೊ ಚ ನಿಷೇವ್ಯಮಾಣಂ
ನಿರ್ವ್ಯಾಜ ನಿರ್ಭರ ದಯೊಭರಿತಂ ವಿಭಾತಿ ।
ವೇದಾಂತವೇದ್ಯಮಿಹ ವೇಗವತೀ ಸಮೀಪೇ
ದೀಪಪ್ರಕಾಶ ಇತಿ ದೈವತಮದ್ವಿತೀಯಮ್ ॥೨॥

(ಶ್ರಿಯಾ ವಸುಧಯಾ ಚ) ಶ್ರೀದೇವಿ ಭೂದೇವಿಯರೊಡನೆ (ನಿತ್ಯಂ) ಎಂದೆಂದೂ (ನಿಷೇವ್ಯಮಾಣಂ) ಸೇವಿಸಲ್ಪಡುವುದೂ, (ನಿರ್ವ್ಯಾಜ-ನಿರ್ಭರ-ದಯಾಭರಿತಂ) ನಿರುಪಾಧಿಕವೂ ಅನವಧಿಕವೂ ಆದ ಕರುಣೆಯಿಂದ ತುಂಬಿದುದೂ (ವೇದಾಂತವೇದ್ಯಂ) ಉಪನಿಷತ್ತುಗಳಿಂದಲೇ ತಿಳಿಯಲ್ಪಡುವುದೂ ಆದ (ಅದ್ವಿತೀಯಂ ದೈವತಂ) ಏಕಮೇವಾದ್ವಿತೀಯವಾದ ದೇವತೆಯು (ವೇಗವತೀ ಸಮೀಪೇ) ವೇಗವತೀ ನದಿಯ ತೀರದಲ್ಲಿ (ದೀಪಪ್ರಕಾಶ ಇತಿ) ದೀಪಪ್ರಕಾಶನೆಂಬ ಹೆಸರಿಂದ (ವಿಭಾತಿ) ಪ್ರಕಾಶಿಸುತ್ತಿದೆ.

ಹಿಂದಿನ ಶ್ಲೋಕದಲ್ಲಿ ಸ್ತುತ್ಯವಾದ ವಸ್ತು ನಿರ್ದೇಶವಾಡಲಾಯಿತು. ಈ ಶ್ಲೋಕದಲ್ಲಿ ಸ್ತುತಿಮಂಗಲವನ್ನು ಆಚರಿಸಿದ್ದಾರೆ. ಶ್ರೀದೇವಿ ಭೂದೇವಿಯರಿಂದ ಸರ್ವದಾ ಸೇವಿಸಲ್ಪಡುತ್ತಿರುವುದು ಭಗವಂತನ ಅಸಾಧಾರಣವಾದ ಲಕ್ಷಣ. 'ಹ್ರೀಶ್ಚತೇ ಲಕ್ಷ್ಮೀಶ್ಚಪತ್ನ್ಯೌ' ಎಂದು ಶ್ರುತಿ ಇದನ್ನು ಹೇಳುತ್ತದೆ. ಶ್ರೀದೇವಿಯು ಅನುಗ್ರಹೈಕಮಯಳು. 'ಆಕಾರತ್ರಯಸಂಪನ್ನಾಂ' ಎಂದಂತೆ ಉಪಾಯ, ಉಪೇಯ ಮತ್ತು ಪುರುಷಕಾರಗಳೆಂಬ ಮೂರು ಆಕಾರಗಳನ್ನುಳ್ಳವಳು. ನಮ್ಮ ತಪ್ಪುಗಳನ್ನು ಭಗವಂತನು ಎಣಿಸದಂತೆ ಮಾಡುವವಳು ಅವಳು. ನಮ್ಮಮೇಲೆ ಭಗವಂತನ ಅನುಗ್ರಹ ಆಗುವಂತೆ ಪ್ರೇರಿಸುವವಳೂ ಅವಳೇ. ಇಂಥ ಪರಾತ್ಪರವಸ್ತು ತಾನು ಪರಂಜ್ಯೋತಿಸ್ಸ್ವರೂಪನಾದರೂ ಎಲ್ಲರೂ ಕಾಣುವಂತೆ ಕಾಂಚೀಪುರಿಯ ವೇಗವತೀ ತೀರದಲ್ಲಿ ದೀಪಪ್ರಕಾಶನಾಗಿ ಮೈದೋರಿರುವುದು ಪರಮಾಶ್ಚರ್ಯವೇ ಸರಿ!

**ದೀಪಸ್ತ್ವಮೇವ ಜಗತಾಂ ದಯಿತಾ ರುಚಿಸ್ತೇ**
**ದೀರ್ಘಂ ತಮಃ ಪ್ರತಿನಿವರ್ತ್ಯಮಿದಂ ಯುವಾಭ್ಯಾಂ ।**
**ಸ್ತವ್ಯಂ ಸ್ತವಪ್ರಿಯಮತಃ ಶರಣೋಕ್ತಿವಶ್ಯಂ**
**ಸ್ತೋತುಂ ಭವಂತಮಭಿಲಷ್ಯತಿ ಜಂತುರೇಷಃ ॥೩॥**

(ತ್ವಮೇವ) ನೀನೇ (ಜಗತಾಂ) ಸ್ಥಾವರ ಜಂಗಮಗಳಾದ ಲೋಕಕ್ಕೆಲ್ಲಾ (ದೀಪ) ದೀಪವಾಗಿದ್ದೀಯೆ. (ತೇ) ಸ್ವಯಂಪ್ರಕಾಶನಾದ ನಿನಗೆ (ದಯಿತಾ) ಭಿನ್ನಪ್ರಿಯೆಯಾದ ದೇವಿಯು (ರುಚಿಃ) ಪ್ರಭೆಯಾಗಿದ್ದಾಳೆ. (ಯುವಾಭ್ಯಾಂ) ನಿಮ್ಮಿಬ್ಬರಿಂದಲೂ (ಇದಂ ದೀರ್ಘಂ ತಮಃ) ಈ ಅನಾದಿಯಾದ ಅಜ್ಞಾನಾಂಧಕಾರವು (ನಿವರ್ತ್ಯಂ) ಕಳೆಯಲ್ಪಡಬೇಕಾಗಿದೆ. (ಅತಃ) ಆದ್ದರಿಂದ (ಸ್ತವ್ಯಂ) ಸ್ತೋತ್ರಮಾಡಲ್ಪಡಬೇಕಾದವನೂ (ಸ್ತವಪ್ರಿಯಂ) ಸ್ತೋತ್ರಪ್ರಿಯನೂ (ಶರಣೋಕ್ತಿವಶ್ಯಂ) 'ನಿನಗೆ ಶರಣಾಗಿದ್ದೇನೆ' ಎಂಬ ಮಾತಿಗೇ ಅಧೀನನಾಗುವವನೂ ಆದ (ಭವಂತಂ) ನಿನ್ನನ್ನು (ಸ್ತೋತುಂ) ಸ್ತೋತ್ರಮಾಡಲು (ಏಷ ಜಂತುಃ) ಈ ಚೇತನನು (ಅಭಿಲಷ್ಯತಿ) ಇಚ್ಛಿಸುತ್ತಾನೆ.

ಸ್ತುತ್ಯನಾದ ಪರಮಪುರುಷನನ್ನು ಆಚಾರ್ಯರು ಸ್ತುತಿಸಿ ಅವನ ಆಭಿಮುಖ್ಯವನ್ನು ಈ ಶ್ಲೋಕದಿಂದ ಬೇಡಿದ್ದಾರೆ. 'ಅನನ್ಯಾ ರಾಘವೇಣಾಹಂ ಭಾಸ್ಕರೇಣ ಪ್ರಭಾ ಯಥಾ' ಎಂಬ ರೀತಿಯಲ್ಲಿ ಶ್ರೀದೇವಿಯು ಭಗವಂತನೊಡನೆ ಎಡೆಬಿಡದೆ ಕೂಡಿದ್ದಾಳೆ. ದೀಪವೂ ಪ್ರಕಾಶವೂ ಹೇಗೆ ಒಂದನ್ನೊಂದು ಬಿಟ್ಟಿರಲಾರವೋ ಹಾಗೆಯೇ ಈ ದಿವ್ಯದಂಪತಿಗಳೂ ಸಹ ನಿತ್ಯಯೋಗದಲ್ಲಿದ್ದಾರೆ.

ದೀರ್ಘಂ ತಮಃ ಎಂಬುವುದರಿಂದ ಅನಾದಿಕಾಲಪ್ರವೃತ್ತವಾದ ಕರ್ಮ, ಅಜ್ಞಾನ, ವಾಸನಾ ಮೊದಲಾದುವು ಸೂಚಿತವಾಗಿವೆ. ಈ ನಿಡುಗತ್ತಲೆಯನ್ನು ಭಗವಂತನು ಕರುಣೆಯಿಂದ ಕಳೆಯುತ್ತಾನೆ.

'ತೇಷಾಮೇವಾನುಕಂಪಾರ್ಥಂ ಅಹಮಜ್ಞಾನಜಂ ತಮಃ ।
ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥'

ಎಂದು ಹೇಳಿದಂತೆ ಪರಮಾತ್ಮನು ನಮ್ಮ ಅಜ್ಞಾನಾಂಧಕಾರವನ್ನು

ಕಳೆಯುವವನಾಗಿದ್ದಾನೆ. 'ಸ್ತವ್ಯ' ಮತ್ತು 'ಸ್ತವಪ್ರಿಯ' ಎಂಬ ಶಬ್ದಗಳು ಶ್ರೀ ವಿಷ್ಣುಸಹಸ್ರನಾಮದಲ್ಲಿ ಪಠಿತವಾಗಿವೆ. 'ಶರಣೋಕ್ತಿವಶ್ಯಂ' ಎಂಬ ಪದ ಅವನ ಸೌಲಭ್ಯದ ಪರಾಕಾಷ್ಠೆಯನ್ನು ತೋರಿಸುತ್ತದೆ.

'ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ ।
ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ ॥'

ಎಂದೂ

'ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ ॥'

ಎಂದೂ ಭರವಸೆಯನ್ನು ಪರಮಕರುಣಾಳುವಾದ ದೇವನು ನೀಡಿದ್ದಾನೆ. 'ನಾನು ನಿನ್ನವನು' ಎಂಬ ಮಾತುಗಳನ್ನೇ ಹೇಳಿದರೂ ಸಾಕು. ಅಂಥ ಶರಣೋಕ್ತಿಗೇ ವಶನಾಗುವ ಮಹಾನುಭಾವ ಅವನು.

'ಯುವಾಭ್ಯಾಂ ಪ್ರತಿ ನಿವರ್ತ್ಯಂ' ಎಂದಿರುವುದರಿಂದ ಶ್ರೀದೇವಿಯೊಡನೆ ಕೂಡಿದ ನಾರಾಯಣನೇ ಉಪಾಯನೂ ಉಪೇಯನೂ ಆಗಿದ್ದಾನೆಂದು ಸೂಚಿತವಾಗಿದೆ. ಉಪೇಯಕೋಟಿಯಲ್ಲಿರುವಂತೆ ಲಕ್ಷ್ಮೀದೇವಿಯು ಉಪಾಯಕೋಟಿಯಲ್ಲಿಯೂ ಇದ್ದಾಳೆಂಬುದನ್ನು ಇದರಿಂದ ಸಮರ್ಥಿಸಲಾಗಿದೆ.

**ಪದ್ಮಾಕರಾದುಪಗತಾ ಪರಿಷಸ್ವಜೇ ತ್ವಾಂ**
**ವೇಗಾಸರಿದ್ವಿಹರಣಾ ಕಲಶಾಬ್ಧಿಕನ್ಯಾ ।**
**ಆಹುಸ್ತದಾಪ್ರಭೃತಿ ದೀಪಸಮಾವಭಾಸ-**
**ಮಾಜಾನತೋ ಮರಕತಪ್ರತಿಮಂ ವಪುಸ್ತೇ** ॥೪॥

(ಪದ್ಮಾಕರಾತ್) ಪದ್ಮವನದಿಂದ (ಉಪಗತಾ) ಬಂದವಳಾಗಿ (ಕಲಶಾಬ್ಧಿಕನ್ಯಾ) ಕ್ಷೀರಸಾಗರಕನ್ನಿಕೆಯಾದ ಶ್ರೀದೇವಿಯು (ವೇಗಾಸರಿದ್ವಿಹರಣಾ) ವೇಗವತೀ ನದಿಯಲ್ಲಿ ವಿಹರಿಸಲುದ್ಯುಕ್ತಳಾಗಿ (ತ್ವಾಂ) ನಿನ್ನನ್ನು (ಪರಿಷಸ್ವಜೇ) ಗಾಢವಾಗಿ ಆಲಿಂಗಿಸಿಕೊಂಡಳು. (ತದಾಪ್ರಭೃತಿ) ಅದು ಮೊದಲ್ಗೊಂಡು (ಆಜಾನತಃ) ಸ್ವಭಾವವಾಗಿಯೇ (ಮರಕತಪ್ರತಿಮಂ)

ನೀಲಮೇಘಶ್ಯಾಮಲವಾದ (ತೇ ವಪುಃ) ನಿನ್ನ ದಿವ್ಯಮಂಗಳವಿಗ್ರಹವನ್ನು (ದೀಪಸಮಾವಭಾಸಂ) ದೀಪಕ್ಕೆ ಸಮನಾದ ಪ್ರಭೆಯುಳ್ಳದಾಗಿ (ಆಹುಃ) ವೇದಾಂತಗಳನ್ನರಿತವರು ಹೇಳುತ್ತಾರೆ.

ವೇಗವತೀ ನದಿಯ ತೀರದಲ್ಲಿ ಸ್ವಾಮಿಯು ವಿರಾಜಮಾನನಾಗಿರುವ ಪ್ರಕಾರವನ್ನೂ ಮಾಹಾತ್ಮ್ಯವನ್ನೂ ಇಲ್ಲಿ ವಿವರಿಸಿದ್ದಾರೆ. ಲಕ್ಷ್ಮೀ ವಿಶಿಷ್ಟನಾಗಿ ಪ್ರಭು ಇಲ್ಲಿ ಮೆರೆದಿದ್ದಾನೆ. ನೀರುಂಡ ಮೇಘದಂತೆ ನೀಲವರ್ಣ ವಾದ ಭಗವಂತನ ದಿವ್ಯಮಂಗಳವಿಗ್ರಹವು ವಕ್ಷಃಸ್ಥಳದಲ್ಲಿ ವಿರಾಜಮಾನೆ ಯಾಗಿರುವ ಶ್ರೀದೇವಿಯ ಸ್ವರ್ಣಕಾಂತಿಯಿಂದಾವೃತವಾಗಿ ಸ್ವರ್ಣಕಾಂತಿ ಯುತವಾಗಿದೆ. ಇದನ್ನೇ 'ಆದಿತ್ಯವರ್ಣಂ ತಮಸಃ ಪರಸ್ತಾತ್' 'ಆ ಪ್ರಣಖಾತ್ಸರ್ವ ಏವ ಸುವರ್ಣಃ' 'ನೀಲತೋಯದಮಧ್ಯಸ್ಥಾ ವಿದ್ಯುಲ್ಲೇಖೇವ ಭಾಸ್ವರಾ' ಎಂದು ಶ್ರುತಿಗಳು ಕೊಂಡಾಡುತ್ತವೆ. ವೇಗವತೀ ತೀರ ದಲ್ಲಿರುವ ಸ್ವಾಮಿಗೆ 'ಮರಕತಸ್ವಾಮೀ' ಎಂಬ ಹೆಸರೂ, 'ದೀಪಪ್ರಕಾಶ' ಎಂಬ ಹೆಸರೂ ಬಂದ ಬಗೆಯನ್ನೂ ಇದರಿಂದ ಸೂಚಿಸಲಾಗಿದೆ. ಶ್ರೀದೇವಿಯ ಗಾಢ ಸಂಶ್ಲೇಷದಿಂದ ನೀಲಮೇಘಶ್ಯಾಮನು ಹಿರಣ್ಯವರ್ಣನಾಗಿ ಶೋಭಿ ಸಿದ್ದಾನೆಂದು ಇಲ್ಲಿ ಆಚಾರ್ಯರು ಅನುಭವಿಸಿದ್ದಾರೆ. ಸ್ತುತ್ಯನಾದ ಭಗವಂತನ ವಿಗ್ರಹಗುಣಾನುಸಂಧಾನ ಮಾಡುತ್ತಾರೆ.

**ಸ್ವಾಮಿನ್ಗಭೀರಸುಭಗಂ ಶ್ರಮಹಾರಿ ಪುಂಸಾಂ**
**ಮಾಧುರ್ಯರಮ್ಯಮನಘಂ ಮಣಿಭಙ್ಗದೃಶ್ಯಂ ।**
**ವೇಗಾಂತರೇ ವಿತನುತೇ ಪ್ರತಿಬಿಂಬಶೋಭಾಂ**
**ಲಕ್ಷ್ಮೀಸರಃ ಸರಸಿಜಾಶ್ರಯಮಂಗಳಂ ತೇ** ||೫||

(ಸ್ವಾಮಿನ್) ಪ್ರಭುವೇ (ಗಭೀರಸುಭಗಂ) ಗಾಂಭೀರ್ಯ ಹಾಗೂ ಅತಿಶಯವಾದ ಕಾಂತಿಯಿಂದ ಕೂಡಿದುದೂ, (ಪುಂಸಾಂ ಶ್ರಮಹಾರಿ) ಸೇವಿಸುವ ಮನುಷ್ಯರ ತಾಪತ್ರಯವನ್ನು ಕಳೆಯುವುದೂ, (ಮಾಧುರ್ಯ ರಮ್ಯಮನಘಂ) ಮಾಧುರ್ಯಗುಣದಿಂದ ಕೂಡಿ ಮನೋಜ್ಞವೂ ದೋಷ ದೂರವೂ ಆದುದೂ, (ಮಣಿಭೃಂಗದೃಶ್ಯಂ) ಒಡೆದ ಇಂದ್ರನೀಲಮಣಿಯಂತೆ

ಕಾಂತಿಯುತವಾದುದೂ, (ಲಕ್ಷ್ಮೀಸರಸ್ಸರಸಿಜಾಶ್ರಯಂ) ಲಕ್ಷ್ಮೀ ಸರೋವರದ ತಾವರೆಯನ್ನಾಶ್ರಯಿಸಿರುವಂಥದೂ ಆದ (ತೇ ಅಂಗಕಂ) ನಿನ್ನ ದಿವ್ಯಮಂಗಲವಿಗ್ರಹವು (ವೇಗಾಂತರೇ) ವೇಗವತೀ ನದಿಯ ಮಧ್ಯದಲ್ಲಿ (ಪ್ರತಿಬಿಂಬಶೋಭಾಂ) ಪ್ರತಿಫಲಿಸುವುದರಿಂದುಂಟಾದ ಚೆಲುವನ್ನು (ವಿತನುತೇ) ವಿಸ್ತಾರಗೊಳಿಸುತ್ತದೆ.

ವೇಗವತೀ ನದಿಯ ತೀರದಲ್ಲಿ ಲಕ್ಷ್ಮೀಸರೋವರವಿದೆ. ಅಲ್ಲಿಯೇ ಉನ್ನತನಾಗಿ ದೀಪಪ್ರಕಾಶಸ್ವಾಮಿಯೂ ವೈದೋರಿದ್ದಾನೆ. ಈ ಶ್ಲೋಕದಲ್ಲಿ ಆ ಲಕ್ಷ್ಮೀಸರೋವರದ ತಾವರೆಯಮೇಲೆ ವಿರಾಜಮಾನನಾಗಿರುವಂತೆ ಶೋಭಿಸಿರುವ ಭಗವಂತನ ದಿವ್ಯಮಂಗಲವಿಗ್ರಹ ವೇಗವತೀ ನದಿಯಲ್ಲಿ ಪ್ರತಿಬಿಂಬಿಸಿರುವುದು ಚೆಲುವಿನ ಗಣಿಯಾಗಿದೆ ಎಂದು ಅನುಭವಿಸಿ ಭಗವಂತನ ದಿವ್ಯಮಂಗಲವಿಗ್ರಹದ ಗುಣಾನುಸಂಧಾನವನ್ನು ಮಾಡಿದ್ದಾರೆ.

ಭಗವಂತನು ತನ್ನ ಪ್ರಭುತ್ವದ ಪ್ರಕಾಶದಿಂದ ಗಂಭೀರನಾಗಿಯೂ ಅತಿಶಯವಾದ ಕಾಂತಿಯುಳ್ಳವನಾದಕಾರಣ ಸುಭಗನೂ ಆಗಿದ್ದಾನೆ. 'ಸರ್ವಗಂಧಃ ಸರ್ವರಸಃ' ಎಂದು ಕೊಂಡಾಡಲ್ಪಡುವ ಇವನು ಸರ್ವರ ದೃಷ್ಟಿಚಿತ್ತಾಪಹಾರಕನಾಗಿ ರಸಾವಹನಾಗಿ ಮಾಧುರ್ಯಗುಣಪೂರ್ಣನಾಗಿದ್ದಾನೆ. ಅನಘಶಬ್ದದಿಂದ ಇವನು ಹೇಯ ಪ್ರತಿಭಟನೆಂದು ಹೇಳಿದಂತಾಯಿತು. ಇವನು ಸಮಸ್ತ ಕಲ್ಯಾಣಗುಣಾತ್ಮಕನಾಗಿ ದೋಷದೂರನಾಗಿದ್ದಾನೆ. ದೃಷ್ಟಿಪ್ರಿಯನಾದವನು ಇವನು. 'ಯಶ್ಚ ರಾಮಂ ನ ಪಶ್ಯತಿ' ಎಂಬಂತೆ ಇವನನ್ನು ಸಂದರ್ಶಿಸದವನು ತನ್ನನ್ನೇ ನಿಂದಿಸಿಕೊಳ್ಳಬೇಕಾಗುವುದು. ಇಂಥ ಸೌಲಭ್ಯಪೂರ್ಣನೂ, ಭುವನಸುಂದರನೂ, ಸರ್ವಸ್ಮಾತ್ಪರನೂ, ಸರ್ವಸ್ವಾಮಿಯೂ ಆದ ದೇವನು ಸಕಲ ಮನುಜ ನಯನಗೋಚರನಾಗಿ ವೇಗವತೀ ತೀರದಲ್ಲಿ ವಿರಾಜಮಾನನಾಗಿದ್ದಾನೆಂದು ಈ ಶ್ಲೋಕದಲ್ಲಿ ವರ್ಣಿಸಿದ್ದಾರೆ.

ಇಲ್ಲಿ ಲಕ್ಷ್ಮೀಸರಃ ಎಂಬುದನ್ನೇ ಬೇರೆಮಾಡಿ ಶ್ಲೇಷೆಯಿಂದ ಲಕ್ಷ್ಮೀ ಸರೋವರವೂ ಭಗವಂತನ ದಿವ್ಯಮಂಗಳವಿಗ್ರಹವೂ ವೇಗವತೀ ನದಿಯಲ್ಲಿ ಪ್ರತಿಬಿಂಬಿಸುತ್ತಿದೆಯೆಂದು ಅರ್ಥಮಾಡಿರುವುದೂ ಉಂಟು.

ಆವಿಶ್ಯ ಧಾರಯಸಿ ವಿಶ್ವಮಮುಷ್ಯ ಯನ್ತಾ
ಶೇಷೀ ಶ್ರಿಯಃಪತಿರಶೇಷತನುರ್ನಿದಾನಮ್ ।
ಇತ್ಯಾದಿಲಕ್ಷಣಗಣೈಃ ಪುರುಷೋತ್ತಮಂ ತ್ವಾಂ
ಜಾನಾತಿ ಯೋ ಜಗತಿ ಸರ್ವವಿದೇಷ ಗೀತಃ ॥ ೬ ॥

(ಆವಿಶ್ಯ) ಅಂತಃಪ್ರವೇಶಮಾಡಿ (ವಿಶ್ವಂ) ಚರಾಚರಾತ್ಮಕವಾದ ಈ ಪ್ರಪಂಚವನ್ನು (ಧಾರಯಸಿ) ನಿಲ್ಲಿಸಿದ್ದೀಯೆ (ಅಮುಷ್ಯ) ಇದರ (ಯನ್ತಾ) ನಿಯಾಮಕನೂ ಆಗಿದ್ದೀಯೆ. (ಶೇಷೀ) ಸ್ವಾಮಿಯೂ ಆಗಿರುವೆ (ಶ್ರಿಯಃಪತಿ) ಲಕ್ಷ್ಮೀಪತಿಯಾಗಿದ್ದೀಯೆ. ಹೀಗೆ (ಅಶೇಷತನುಃ) ಸಮಸ್ತವನ್ನೂ ಶರೀರವನ್ನಾಗಿ ಹೊಂದಿದ್ದೀಯೆ. (ನಿದಾನಮ್) ಆದಿಕಾರಣನಾಗಿದ್ದೀಯೆ. (ಇತ್ಯಾದಿ ಲಕ್ಷಣಗಣೈಃ) ಇವೇ ಮೊದಲಾದ ಲಕ್ಷಣಗಳ ಸಮೂಹದಿಂದ (ತ್ವಾಂ) ನಿನ್ನನ್ನು (ಪುರುಷೋತ್ತಮಂ) ಪುರುಷೋತ್ತಮನೆಂದು (ಯೋ ಜಾನಾತಿ) ಯಾವನು ತಿಳಿಯುವನೋ (ಏಷಃ) ಇವನು (ಜಗತಿ ಸರ್ವವಿತ್ ಗೀತಃ) ಜಗತ್ತಿನಲ್ಲಿ ಸರ್ವಜ್ಞನೆಂದು ಹೇಳಲ್ಪಡುತ್ತಾನೆ.

ಈ ಶ್ಲೋಕದಲ್ಲಿ ಭಗವಂತನು ಪುರುಷೋತ್ತಮನೆಂದು ವರ್ಣಿಸಿದೆ. ಶ್ರೀಮದ್ಭಗವದ್ಗೀತೆಯ ಹದಿನೈದನೆಯ ಅಧ್ಯಾಯದ ಸಾರಾರ್ಥವನ್ನು ಹೇಳುವಾಗ ಆಚಾರ್ಯ ಯಾಮುನರು 'ವ್ಯಾಪನಾದ್ಭರಣಾತ್ಸ್ವಾಮ್ಯಾತ್ ಅನ್ಯಃ ಪಂಚದಶೋದಿತಃ' ಎಂದು ಹೇಳಿರುವುದನ್ನು ಇಲ್ಲಿ ಅನುಸಂಧಾನ ಮಾಡಿದೆ. ಭಗವಂತನು ಚೇತನಾಚೇತನ ಪದಾರ್ಥಗಳಿಗಿಂತ ವಿಲಕ್ಷಣನಾಗಿ ಬೇರೆಯಾಗಿದ್ದಾನೆ—ಅವುಗಳನ್ನೆಲ್ಲಾ ಅವನು ನಿಯಮಿಸುತ್ತಿದ್ದಾನೆ. ಅವುಗಳಿಗೆ ಧಾರಕನಾಗಿದ್ದಾನೆ. ಅವುಗಳಿಗೆ ಒಡೆಯನಾಗಿದ್ದಾನೆ. ಭಗವಂತನ ಲಕ್ಷಣಗಳನ್ನು ಬಗೆಬಗೆಯಾಗಿ ಹೇಳಬಹುದು. ಸರ್ವಾಧಾರನಾದವನು ಭಗವಂತ. ಶ್ರಿಯಃಪತಿಯಾದವನು ಭಗವಂತನು, ಸರ್ವಶರೀರಿ ಅವನು, ಸರ್ವಕ್ಕೂ ಆದಿಕಾರಣ ಅವನು. ಅವನು 'ಉತ್ತಮಃ ಪುರುಷಸ್ತ್ವನ್ಯಃ' ಎಂದಂತೆ ಪುರುಷೋತ್ತಮನಾಗಿದ್ದಾನೆ. ಹೀಗೆ ಅವನು ಪುರುಷೋತ್ತಮನೆಂದು ತಿಳಿದವರು ಸರ್ವಜ್ಞರೆಂದು ಈ ಶ್ಲೋಕದಲ್ಲಿ ಹೇಳಿದ್ದಾರೆ.

ವಿಶ್ವಂ ಶುಭಾಶ್ರಯವದೀಶ ವಪುಸ್ತ್ವದೀಯಂ
ಸರ್ವಾ ಗಿರಸ್ತ್ವಯಿ ಪತನ್ತಿ ತತೋಽಸಿ ಸರ್ವಃ ।
ಸರ್ವೇ ಚ ವೇದವಿಧಯಸ್ತ್ವದನುಗ್ರಹಾರ್ಥಾಃ
ಸರ್ವಾಧಿಕಸ್ತ್ವಮಿತಿ ತತ್ತ್ವವಿದಸ್ತದಾಹುಃ ॥ ೭ ॥

(ಈಶ) ಎಲೈ ಒಡೆಯನೇ, (ಶುಭಾಶ್ರಯವತ್) ಸರ್ವೋಪಾಸ್ಯವಾದ ನಿನ್ನ ದಿವ್ಯ ಮಂಗಲ ವಿಗ್ರಹದಂತೆಯೇ (ವಿಶ್ವಂ) ಚಿದಚಿದಾತ್ಮಕವಾದ ಈ ಸಮಸ್ತ ಪ್ರಪಂಚವೂ (ತ್ವದೀಯಂ ವಪುಃ) ನಿನ್ನ ಶರೀರವೇ ಆಗಿದೆ. (ಸರ್ವಾಗಿರಃ) ಲೌಕಿಕ ಹಾಗೂ ವೈದಿಕಗಳಾದ ಎಲ್ಲ ವಚನಗಳೂ (ತ್ವಯಿ) ಸರ್ವಪ್ರಕಾರಕನಾದ ನಿನ್ನಲ್ಲಿ (ಪತಂತಿ) ಮುಖ್ಯ ವೃತ್ತಿಯಿಂದ ಪರ್ಯವಸಾನವಾಗುತ್ತವೆ. (ತತಃ) ಆದ್ದರಿಂದ (ಸರ್ವಃ ಅಸಿ) ಎಲ್ಲವೂ ನೀನೇ ಆಗಿದ್ದೀಯೆ. (ಸರ್ವೇಚ ವೇದವಿಧಯಃ) ಕರ್ಮವನ್ನು ವಿಧಿಸುವ ವೈದಿಕವಾದ ಎಲ್ಲ ವಿಧಿಗಳೂ (ತ್ವದನುಗ್ರಹಾರ್ಥಾಃ) ನಿನ್ನ ಪ್ರಸನ್ನತೆಯನ್ನೇ ಪ್ರಯೋಜನವನ್ನಾಗಿ ಹೊಂದಿವೆ. (ತತ್ತ್ವವಿದಃ) ತತ್ತ್ವಜ್ಞಾನಿಗಳು (ತ್ವಂ ಸರ್ವಾಧಿಕಃ ಇತಿ) ನೀನು ಎಲ್ಲರಿಗಿಂತಲೂ ಅಧಿಕನೆಂದು (ಆಹುಃ) ಹೇಳಿದರು.

ಹಿಂದಿನ ಶ್ಲೋಕದಲ್ಲಿ ಸರ್ವಾತ್ಮನಾಗಿ ಭಗವಂತನು ಸರ್ವಾಧಿಕನಾಗಿದ್ದಾನೆಂದು ಹೇಳಲಾಯಿತು. ಈ ಶ್ಲೋಕದಲ್ಲಿ ಚರಾಚರಾತ್ಮಕವಾದ ಪ್ರಪಂಚವು ಅವನಿಗೆ ಶರೀರವಾಗಿರುವುದರಿಂದ ಅವನಿಗೆ ಆಧಿಕ್ಯವುಂಟೆಂಬುದನ್ನು ಹೇಳಿ ಭಗವಂತನು ಸರ್ವಶಬ್ದವಾಚ್ಯನಾಗಿದ್ದಾನೆಂದು ತಿಳಿಸುತ್ತಾರೆ.

ಭಗವಂತನು ತನ್ನ ದಿವ್ಯಮಂಗಳ ವಿಗ್ರಹವನ್ನು ಶರೀರವಾಗಿ ಹೊಂದಿರುವಂತೆ ಚರಾಚರಾತ್ಮಕವಾದ ಜಗತ್ತನ್ನೂ ಶರೀರವನ್ನಾಗಿ ಹೊಂದಿದ್ದಾನೆ. ಶರೀರವನ್ನೇ ಹೇಳುವ ಶಬ್ದಗಳು ಶರೀರಿಪರ್ಯಂತವಾಗಿ ಅನ್ವಯಿಸುವುದರಿಂದ ಎಲ್ಲ ಶಬ್ದಗಳೂ ಅವನನ್ನೇ ಹೇಳುತ್ತವೆ. ವೇದದಲ್ಲಿ ಹೇಳಲಾಗಿರುವ ಎಲ್ಲ ವೈದಿಕ ವಿಧಿಗಳೂ ಭಗವಂತನ ಪ್ರಸನ್ನತೆಯನ್ನು ಪಡೆಯುವುದಕ್ಕಾಗಿಯೇ ಇವೆ. ಆಯಾ ಕರ್ಮಗಳಿಂದ ಪ್ರೀತನಾದ ಭಗವಂತನು ಫಲಪ್ರದಾನ ಮಾಡುತ್ತಾನೆ. ಮೀಮಾಂಸಕರು ಹೇಳುವಂತೆ ಅಪೂರ್ವವಾಗಲೀ ಅದೃಷ್ಟ

ವಾಗಲೀ ಫಲಪ್ರಾಪ್ತಿಗೆ ಕಾರಣವಲ್ಲ. ಭಗವಂತನ ಅನುಗ್ರಹವೇ ಕಾರಣ. ಹೀಗೆ ಭಗವಂತನು ಸರ್ವಾಧಿಕನಾಗಿದ್ದಾನೆ.

**ಜ್ಞಾನಂ ಬಲಂ ನಿಯಮನಕ್ಷಮತಾಽಥ ವೀರ್ಯಂ**
**ಶಕ್ತಿಶ್ಚ ತೇಜ ಇತಿ ತೇ ಗುಣಷಟ್ಕಮಾದ್ಯಮ್ ।**
**ಸರ್ವಾತಿಶಾಯಿನಿ ಹಿಮೋಪವನೇಶ ಯಸ್ಮಿ-**
**ನ್ನನ್ತರ್ಗತೋ ಜಗದಿವ ತ್ವಯಿ ಸದ್ಗುಣೌಘಃ ॥೮॥**

(ಜ್ಞಾನಂ) ಜ್ಞಾನ, (ಬಲಂ) ಬಲ, (ನಿಯಮನಕ್ಷಮತಾ) ನಿಯಮನ ಸಾಮರ್ಥ್ಯ, (ವೀರ್ಯಂ) ವೀರ್ಯ, (ಶಕ್ತಿಶ್ಚತೇಜ ಇತಿ) ಶಕ್ತಿ ಮತ್ತು ತೇಜಸ್ಸು ಎಂಬುವು, (ತೇ) ನಿನ್ನ, (ಆದ್ಯಂ) ಮುಖ್ಯವಾದ, (ಗುಣಷಟ್ಕಂ) ಷಡ್ಗುಣಗಳು. (ಹಿಮೋಪವನೇಶ) ಎಲೈ ಶೀತಲಾರಾಮಪತೇ, (ಸರ್ವಾತಿ ಶಾಯಿನಿ) ಎಲ್ಲವನ್ನೂ ಅತಿಶಯಿಸಿರುವ, (ತ್ವಯಿ) ನಿನ್ನಲ್ಲಿ, (ಜಗದಿವ) ಈ ಚಿದಚಿತಾತ್ಮಕವಾದ ಪ್ರಪಂಚವು ಹೇಗೋ ಹಾಗೆ, (ಯಸ್ಮಿನ್) ಆ ಆರು ಗುಣಗಳಲ್ಲಿ, (ಸದ್ಗುಣೌಘಃ) ಕಲ್ಯಾಣಗುಣಗಳ ಸಮೂಹವು, (ಅಂತರ್ಗತಃ) ಅಂತರ್ಭೂತವಾಗಿದೆ.

ಭಗವಂತನ ದಿವ್ಯಸ್ವರೂಪವನ್ನನುಸಂಧಾನಮಾಡಿದಮೇಲೆ ಈ ಶ್ಲೋಕ ದಲ್ಲಿ ಭಗವಂತನ ಷಡ್ಗುಣಗಳನ್ನು ನಿರೂಪಿಸುತ್ತಾರೆ. ಅಸಂಖ್ಯವಾದ ಕಲ್ಯಾಣಗುಣಗಳು ಈ ಆರು ಗುಣಗಳಲ್ಲಿ ಅಂತರ್ಗತವಾಗುವುವೆಂದೂ ತಿಳಿಸಿದ್ದಾರೆ. ಭಗವಂತನಿಗೆ ಈ ಷಡ್ಗುಣಗಳು ಎಲ್ಲ ವ್ಯೂಹಗಳಲ್ಲಿಯೂ ಇರುತ್ತವೆ. ಎಲ್ಲ ಬ್ರಹ್ಮವಿದ್ಯೆಗಳಲ್ಲಿಯೂ ಇವುಗಳ ಅನುಸಂಧಾನ ಆವಶ್ಯಕ ವೆಂದು ತಿಳಿಸಿದೆ.

**ದೀಪಾವಭಾಸ ದಯಯಾ ವಿಧಿಪೂರ್ವಮೇತ-**
**ದ್ವಿಶ್ವಂ ವಿಧಾಯ ನಿಗಮಾನಪಿ ದತ್ತವಂತಂ ।**
**ಶಿಷ್ಯಾಯಿತಾಃ ಶರಣಯನ್ತಿ ಮುಮುಕ್ಷವಸ್ತ್ವಾ-**
**ಮಾದ್ಯಂ ಗುರುಂ ಗುರುಪರಂಪರಯಾಧಿಗಮ್ಯಂ ॥೯॥**

(ದೀಪಾವಭಾಸ) ದೀಪಪ್ರಕಾಶನೇ, (ದಯಯಾ) ಚೇತನರ ಮೇಲಿನ ಕನಿಕರದಿಂದ, (ವಿಧಿಪೂರ್ವಂ) ಚತುರ್ಮುಖಬ್ರಹ್ಮನನ್ನೇ ಆದಿಯಾಗಿಯುಳ್ಳ (ಏತತ್) ಈ (ವಿಶ್ವಂ) ಚೇತನಾಚೇತನಾತ್ಮಕವಾದ ಪ್ರಪಂಚವನ್ನು, (ವಿ ಧಾ ಯ) ಸೃಷ್ಟಿಮಾಡಿ, (ನಿಗಮಾನಪಿದತ್ತವಂತಂ) ವೇದಗಳನ್ನೂ ಕೊಟ್ಟವನೂ ಆಗಿ, (ಗುರುಪರಂಪರಯಾಧಿಗಮ್ಯಂ) ತಮ್ಮ ತಮ್ಮ ಗುರು ಪರಂಪರೆಯಿಂದ ಅರಿಯಲ್ಪಡಬೇಕಾದವನೂ, (ಆದ್ಯಂ ಗುರುಂ) ಪ್ರಥಮ ಗುರುವೂ ಆದ, (ತ್ವಾಂ) ನಿನ್ನನ್ನು, (ಮುಮುಕ್ಷವಃ) ಮೋಕ್ಷೇಚ್ಛುಗಳು, (ಶಿಷ್ಯಾಯಿತಾಃ ಶರಣಯಂತಿ) ಶಿಷ್ಯರಂತಾಗಿ ಶರಣುಹೋಗುತ್ತಾರೆ.

ಇದುವರೆಗೆ ಭಗವಂತನು ಪ್ರಾಪ್ಯನೆಂದು ಹೇಳಲಾಯಿತು. ಈ ಶ್ಲೋಕದಲ್ಲಿ ಅವನು ಹೇಗೆ ಪ್ರಾಪ್ಯನೋ ಹಾಗೆಯೇ ಪ್ರಾಪಕನೂ ಆಗಿದ್ದಾನೆಂದು ಹೇಳಿದ್ದಾರೆ. 'ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ । ತಂ ಹ ದೇವಮಾತ್ಮಬುದ್ಧಿಪ್ರಕಾಶಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ ॥' ಎಂಬ ಶ್ರುತಿಯ ಅರ್ಥವನ್ನು ಇಲ್ಲಿ ವಿವರಿಸಿದೆ. 'ಅವ್ಯಕ್ತಂ ಅಕ್ಷರೇ ಲೀಯತೇ ತಮೋ ದೇವೇ ಪರೇ ಏಕೀಭವತಿ' ಎಂಬ ಶ್ರುತಿವಾಕ್ಯದಂತೆ ಪರಮಾತ್ಮನಲ್ಲಿ ಏಕೀಭವಿಸಿದ್ದ ಪ್ರಕೃತಿ ಅವನ ಸಂಕಲ್ಪದಂತೆ ಮಹದಹಂಕಾರ, ಪಂಚತನ್ಮಾತ್ರೆಗಳು, ಪಂಚಭೂತಗಳು, ಏಕಾದಶೇಂದ್ರಿಯಗಳು ಹೀಗೆ ಇಪ್ಪತ್ತನಾಲ್ಕು ತತ್ತ್ವಗಳಾಗಿ ಪರಿಣಮಿಸುವುದು. ಅನಂತರ ಪಂಚೀಕರಣದಿಂದ ಅಂಡಸೃಷ್ಟಿಯಾಗುವದು. ವಿಷ್ಣುವಿನ ನಾಭಿಕಮಲದಿಂದ ಚತುರ್ಮುಖನುಂಟಾಗುವನು. ಇದು ಸಮಷ್ಟಿಸೃಷ್ಟಿ. ಮುಂದೆ ಚತುರ್ಮುಖನ ಮೂಲಕ ನಡೆಯುವ ಸೃಷ್ಟಿಗೆ ವ್ಯಷ್ಟಿಸೃಷ್ಟಿ ಎಂದು ಹೆಸರು. ಇವಕ್ಕೆಲ್ಲಾ ಪರಮಾತ್ಮನು ಏಕೈಕ ಕಾರಣನೆಂದು ಇಲ್ಲಿ ಹೇಳಿದೆ. ಮನು ಸೃಷ್ಟಿಕ್ರಮವನ್ನು ಹೇಳುವಾಗ—

'ಸೋಽಭಿಧ್ಯಾಯಶರೀರಾತ್ ಸ್ವಾತ್ ಸಿಸೃಕ್ಷುಃ ವಿವಿಧಾಃ ಪ್ರಜಾಃ ।
ಅಪಏವ ಸಸರ್ಜಾದೌ ತಾಸು ವೀರ್ಯಮಪಾಸೃಜತ್ ॥
ತದಂಡಮಭವದ್ಧೈಮಂ ಸಹಸ್ರಾಂಶು ಸಮಪ್ರಭಂ ।
ತಸ್ಮಿನ್ ಜಜ್ಞೇ ಸ್ವಯಂ ಬ್ರಹ್ಮಾ ಸರ್ವಲೋಕ ಪಿತಾಮಹಃ ॥'

ಎಂದು ಹೇಳಿದ್ದಾರೆ. ಭಗವಂತನ ಸಂಕಲ್ಪಮಾತ್ರದಿಂದ ಸೃಷ್ಟಿ

ಸಂಹಾರಗಳು ಆಗುವುವು. 'ಮನಸ್ಯೈವ ಜಗತ್ಸೃಷ್ಟಿಂ ಸಂಹಾರಂ ಚ ಕರೋತಿ ಯಃ' ಎಂದು ಇದನ್ನೇ ಹೇಳಿದ್ದಾರೆ. ಸೃಷ್ಟಿ ಸಂಹಾರಗಳು ಭಗವಂತನ ದಯೆಯಿಂದ ಆಗುವುವು. ಅಚಿತ್ಕಲ್ಪರಾಗಿ ಪ್ರಕೃತಿಯೊಡನೆ ಏಕೀಭವಿಸಿದ್ದ ಚೇತನರ ಮೇಲಿನ ಕರುಣೆಯಿಂದ ಭಗವಂತನು ಅವರು ಸಾಧನಾನುಷ್ಠಾನಗಳನ್ನು ಮಾಡಿ ಮೋಕ್ಷವನ್ನು ಸಂಪಾದಿಸಿಕೊಳ್ಳಲು ಅನುಕೂಲಿಸಲೆಂದು ಅವರಿಗೆ ಕರಣ ಕಳೇಬರಾದಿಗಳನ್ನು ಕರುಣಿಸುತ್ತಾನೆ. ಹೀಗೆ ವಿಶ್ವದ ಸೃಷ್ಟಿ ಭಗವಂತನ ದಯಾಕಾರ್ಯ. ದೇಹ ಯೋಗವಿಲ್ಲದೆ ಯಾವ ಸಾಧನೆಯೂ ನಡೆಯದು. ಆ ಪ್ರಕೃತಿಯಲ್ಲಿ ಮಗ್ನರಾದ ಅನಾದಿ ಮಾಯೆಯಿಂದ ಸುಪ್ತರಾದ ಚೇತನರು ತಮ್ಮ ಅಭ್ಯುದಯವನ್ನು ಸಾಧಿಸಿಕೊಳ್ಳಲು ಸಾಧನವಾದ ಶರೀರವನ್ನು ಕರುಣಿಸಿ ಸದಸದ್ವಿವೇಕಕ್ಕಾಗಿ ಬೇಕಾದ ಶಾಸ್ತ್ರವನ್ನೂ ಕರುಣೆಯಿಂದ ಕೊಡುತ್ತಾನೆ. ಇದನ್ನೇ ದಯಾಶತಕದಲ್ಲಿ 'ಶಮಯಸಿ ತಮಃ ಪ್ರಜಾನಾಂ ಶಾಸ್ತ್ರಮಯೇನ ಸ್ಥಿರಪ್ರದೀಪೇನ' ಎಂದು ಆಚಾರ್ಯರು ಹೇಳಿದ್ದಾರೆ. ಹೀಗೆ ನಿಗಮದಾನರೂಪವಾದ ಜ್ಞಾನಪ್ರದನಾಗಿ ಭಗವಂತನು ಪ್ರಥಮಾಚಾರ್ಯನಾಗಿದ್ದಾನೆ. ಹೀಗೆ ಈ ಶ್ಲೋಕದಲ್ಲಿ ಭಗವಂತನು ಪ್ರಾಪ್ತನಾಗಿರುವಂತೆ ಪ್ರಾಪಕನೂ ಆಗಿದ್ದಾನೆಂದೂ ಅವನೇ ಸರ್ವಕಾರಣನೆಂದೂ, ಅವನೇ ನಮಗೆ ಪ್ರಥಮಾಚಾರ್ಯನೆಂದೂ ಅನುಸಂಧಾನ ಮಾಡಿದ್ದಾರೆ.

**ಸತ್ತಾಸ್ಥಿತಿಪ್ರಯತನಪ್ರಮುಖೈರುಪಾತ್ತಂ**
**ಸ್ವಾರ್ಥಂ ಸದೈವ ಭವತಾ ಸ್ವಯಮೇವ ವಿಶ್ವಂ ।**
**ದೀಪಪ್ರಕಾಶ ತದಿಹ ತ್ವದವಾಪ್ತಯೇ ತ್ವಾಂ-**
**ಅವ್ಯಾಜಸಿದ್ಧಮನಪಾಯಮುಪಾಯಮಾಹುಃ ॥೧೦॥**

(ದೀಪಪ್ರಕಾಶ) ದೀಪಪ್ರಕಾಶನೇ, (ಸತ್ತಾಸ್ಥಿತಿಪ್ರಯತನಪ್ರಮುಖೈಃ) ಇರುವಿಕೆಯೇನು, ರಕ್ಷಣೆಯೇನು, ಪ್ರಯತ್ನಮಾಡುವುದೇನು ಮುಂತಾದುವುಗಳಿಂದ, (ವಿಶ್ವಂ) ಈ ಚಿದಚಿದಾತ್ಮಕವಾದ ಪ್ರಪಂಚವು, (ಭವತಾ) ನಿನ್ನಿಂದ, (ಸ್ವಾರ್ಥಂ) ಸ್ವಪ್ರಯೋಜನಾರ್ಥವಾಗಿ, (ಸದೈವ) ಪ್ರಳಯ

ಸೃಷ್ಟಿ ಹಾಗೂ ಮೋಕ್ಷಕಾಲಗಳಲ್ಲಿ, (ಸ್ವಯಮೇವ) ನಿನ್ನಿಂದಲೇ, (ಉಪಾತ್ತಂ) ಸ್ವೀಕರಿಸಲ್ಪಟ್ಟಿದೆ. (ಅತ್) ಆ ಕಾರಣದಿಂದಲೇ, (ಇಹ) ಇಲ್ಲಿ, (ತ್ವದವಾಪ್ತಯೇ) ನಿನ್ನನ್ನು ಪಡೆಯಲು, (ತ್ವಾಂ) ಗುಣನಿಧಿಯಾದ ನಿನ್ನನ್ನೇ, (ಅವ್ಯಾಜಸಿದ್ಧಂ) ಇತರೋಪಾಯ ನಿರಪೇಕ್ಷನಾದ ಹಾಗೂ (ಅನಪಾಯಂ ಉಪಾಯಂ) ಅಪಾಯರಹಿತವಾದ ಉಪಾಯವೆಂದು, (ಆಹುಃ) ಹೇಳಿದರು.

ಹಿಂದಿನ ಶ್ಲೋಕದಲ್ಲಿ ಭಗವಂತನು ಸಿದ್ಧೋಪಾಯವೆಂದೂ, ನಾವು ಅನುಷ್ಠಿಸುವ ಸಾಧ್ಯೋಪಾಯದಿಂದ ಆತನು ವಶನಾಗುವನೆಂದೂ ಹೇಳಲಾಯಿತು. ಮತ್ತೆ ಕೆಲವರು ಆಚಾರ್ಯರುಗಳ ಅಭಿಪ್ರಾಯದಂತೆ ಗುಣನಿಧಿಯಾದ ಭಗವಂತನೇ ನಿರಪೇಕ್ಷೋಪಾಯನಾಗಿದ್ದಾನೆಂಬುದನ್ನು ಇಲ್ಲಿ ವಿವರಿಸಿದ್ದಾರೆ. ಸ್ವರೂಪ, ಸ್ಥಿತಿ, ಪ್ರವೃತ್ತಿಃ ಪ್ರಮುಖೇಃ ಎಂದಿರುವುದರಿಂದ ಪ್ರಧಾನಫಲಿಯು ಭಗವಂತನೇ ಎಂದು ಸೂಚಿಸಲಾಗಿದೆ. ಭಗವಂತನಿಗೆ ನಿರಂಕುಶಸ್ವಾತಂತ್ರ್ಯವಿರುವುದರಿಂದಲೂ, ಎಲ್ಲ ವಸ್ತುಗಳೂ ಅವನಿಗೆ ಪರತಂತ್ರವಾಗಿರುವುದರಿಂದಲೂ ಅವನು ಅವ್ಯಾಜಸಿದ್ಧವಾದ ಉಪಾಯನಾಗಿದ್ದಾನೆ. 'ಯಮೇವೈಷ ವೃಣುತೇ ತೇನ ಲಭ್ಯಃ' ಎಂಬ ಶ್ರುತಿಯೂ ಇದನ್ನೇ ತಿಳಿಸುತ್ತದೆ.

**ಭೋಗ್ಯಂ ಮುಕುಂದ ಗುಣಭೇದಮಚೇತನೇಷು**
**ಭೋಕ್ತೃತ್ವಮಾತ್ಮನಿ ನಿವೇಶ್ಯ ನಿಜೇಚ್ಛಯೈವ ।**
**ಪಾಂಚಾಲಿಕಾಶುಕವಿಭೂಷಣ ಭೋಗದಾಯೀ**
**ಸಮ್ರಾಡಿವಾತ್ಮಸಮಯಾ ಸಹ ಮೋದಸೇ ತ್ವಮ್ ॥೧೧॥**

(ಮುಕುಂದ) ಎಲೈ ಮುಕುಂದನೇ, (ನಿಜೇಚ್ಛಯೈವ) ನಿನ್ನ ಸಂಕಲ್ಪದಿಂದಲೇ, (ಅಚೇತನೇಷು) ಅಚೇತನ ಪದಾರ್ಥಗಳಲ್ಲಿ, (ಭೋಗ್ಯಂ) ಅನುಭವಿಸಲ್ಪಡತಕ್ಕ, (ಗುಣಭೇದಂ) ಸತ್ವರಜಸ್ತಮಃಗಳೆಂಬ ಗುಣತ್ರಯ ಭೇದವನ್ನೂ, (ಆತ್ಮನಿ) ಚೇತನವರ್ಗದಲ್ಲಿ, (ನಿವೇಶ್ಯ) ವ್ಯವಸ್ಥೆಗೊಳಿಸಿ, (ಪಾಂಚಾಲಿಕಾಶುಕವಿಭೂಷಣಭೋಗದಾಯೀ) ಬೊಂಬೆಯೇನು ಗಿಳಿ

ಯೇನು ಇವುಗಳಿಗೆ ಹಾರವೇ ಮೊದಲಾದ ಒಡವೆಗಳನ್ನಿಟ್ಟು ಹಾಲು ಬೆಣ್ಣೆ ಮೊದಲಾದ ಭೋಗ್ಯವಸ್ತುಗಳನ್ನಿತ್ತು ನಲಿಯುವ, (ಸಮ್ರಾಡಿವ) ಚಕ್ರವರ್ತಿಯಂತೆ, (ತ್ವಮ್) ಸರ್ವಶಕ್ತನೂ ಕರುಣಾಳುವೂ ಆದ ನೀನು, (ಆತ್ಮಸಮಯಾ ಸಹ) ನಿನಗೆ ಸಮಾನವಾಗಿರುವ ಲಕ್ಷ್ಮೀದೇವಿಯೊಡನೆ, (ಮೋದಸೇ) ಸಂತೋಷಪಡುತ್ತೀಯೆ.

ಲೋಕದಲ್ಲಿರುವ ಚೇತನಾಚೇತನಪದಾರ್ಥಗಳೆಲ್ಲವೂ ಭಗವಂತನ ಸಂಕಲ್ಪದಂತೆ ಆಗಿವೆಯೆಂದೂ, ಪ್ರವರ್ತಿಸುತ್ತಿವೆಯೆಂದೂ ಅವುಗಳೆಲ್ಲದರ ವ್ಯಾಪಾರದಿಂದ ಅವನಿಗೇ ಸಂತೋಷವೆಂದೂ ಈ ಶ್ಲೋಕದಲ್ಲಿ ಹೇಳಿದೆ. ಭಗವಂತನು ಹೀಗೆ ಪ್ರಧಾನಫಲಿಯಾಗಿದ್ದಾನೆ. ಲೋಕದಲ್ಲಿ ಭಗವತ್ಸಂಕಲ್ಪದಂತೆಯೇ ನಮಗೆ ಭೋಗಾನುಭವವುಂಟಾಗುತ್ತದೆ. ಪ್ರಕೃತಿಭೋಗ್ಯವಾಗಿದೆ. ಆದರೆ ಇವೆಲ್ಲ ಭಗವಂತನಿಗೆ ಭೋಗ್ಯವಾಗಿವೆ. ಇದನ್ನರಿತು 'ನಾನು, ನನ್ನದು' ಎಂಬ ಭ್ರಮೆಯನ್ನು ಬಿಟ್ಟು ಭಗವಂತನಲ್ಲಿ ಅನನ್ಯಭಾವದಿಂದ ಶರಣುಹೋಗಬೇಕು.

**ತ್ವಾಂ ಮಾತರಂ ಚ ಪಿತರಂ ಸಹಜಂ ನಿವಾಸಂ**
**ಸಂತಃ ಸಮೇತ್ಯ ಶರಣಂ ಸುಹೃದಂ ಗತಿಂ ಚ ।**
**ನಿಃಸೀಮ ನಿತ್ಯ ನಿರವದ್ಯಸುಖಪ್ರಕಾಶಂ**
**ದೀಪಪ್ರಕಾಶ ಸವಿಭೂತಿಗುಣಂ ವಿಶಂತಿ ॥೧೨॥**

(ದೀಪಪ್ರಕಾಶ) ದೀಪಪ್ರಕಾಶನೇ, (ಮಾತರಂ) ವಾತ್ಸಲ್ಯವೇ ಮೊದಲಾದ ಗುಣಗಳುಳ್ಳ ತಾಯಿಯೂ, (ಪಿತರಂ) ರಕ್ಷಕತ್ವವೇ ಮೊದಲಾದ ಗುಣಗಳುಳ್ಳ ತಂದೆಯೂ, (ಸಹಜಂ ನಿವಾಸಂ) ಸಮಾನವಾದ ಸುಖದುಃಖಗಳನ್ನುಳ್ಳ ಸರ್ವಾಶ್ರಯನೂ, (ಶರಣಂ) ಉಪಾಯಭೂತನೂ, (ಸುಹೃದಂ) ಮಂಗಳಕರವಾದುದನ್ನು ಹಾರೈಸುವ ಹೃದಯವುಳ್ಳ ಹಿತೈಷಿಯೂ, (ಗತಿಂಚ) ಪ್ರಾಪ್ಯಭೂತನೂ ಆದ, (ತ್ವಾಂ) ಸರ್ವವಿಧವಾದ ಬಂಧುವೂ ಆದ ನಿನ್ನನ್ನು, (ಸಂತಃ) ತಮ್ಮ ಮತ್ತು ನಿನ್ನ ಸ್ವರೂಪವನ್ನರಿತ ಸಜ್ಜನರು, (ಸಮೇತ್ಯ) ಹೊಂದಿ, (ನಿಃಸೀಮ ನಿರವದ್ಯ ಸುಖಪ್ರಕಾಶಂ) ಎಲ್ಲೆಯಿಲ್ಲದುದೂ

ನಿತ್ಯವಾದುದೂ ನಿರ್ದೋಷವಾದುದೂ ಆದ ಆನಂದರೂಪವಾದ ಜ್ಞಾನವನ್ನು (ಸ ವಿಭೂತಿಗುಣಂ) ವಿಭೂತಿದ್ವಯಗುಣಗಳೊಡನೆ, (ವಿಶಂತಿ) ಪ್ರವೇಶಿಸುತ್ತಾರೆ.

ಹಿಂದಿನ ಶ್ಲೋಕದಲ್ಲಿ ಭೋಗಾನುಭವದ ಕಾರಣವನ್ನು ತಿಳಿಸಲಾಯಿತು. ಈ ಶ್ಲೋಕದಲ್ಲಿ ಭಗವಂತನ ಮುಕ್ತಿಪ್ರದತ್ವವನ್ನೂ ಪ್ರಸ್ತಾಪಿಸಿದ್ದಾರೆ. ಭಗವಂತನು ನಮಗೆ ಸರ್ವವಿಧವಾದ ಬಂಧುವಾಗಿದ್ದಾನೆ. 'ತ್ವಮೇವ ಮಾತಾ ಚ ಪಿತಾ ತ್ವಮೇವ' ಎಂಬಲ್ಲಿಯೂ ಇದನ್ನೇ ಕೊಂಡಾಡಿರುವುದು. ಈ ಶ್ಲೋಕದ ಪೂರ್ವಾರ್ಧವು ದ್ವಯಮಂತ್ರದ ಪೂರ್ವ ಖಂಡಾರ್ಥವನ್ನೂ, ಉತ್ತರಾರ್ಧವು ಅದೇ ಮಂತ್ರದ ಉತ್ತರಾರ್ಧವನ್ನೂ ವಿವರಿಸುವುದಾಗಿದೆ. ಪೂರ್ವಖಂಡದಲ್ಲಿ ನಾರಾಯಣ ಶಬ್ದಕ್ಕೆ ಶರಣ್ಯತೆಯಲ್ಲಿಯೇ ತಾತ್ಪರ್ಯವಿರುವುದರಿಂದ ವಾತ್ಸಲ್ಯ, ಸ್ವಾಮಿತ್ವ, ಸೌಶೀಲ್ಯ, ಸೌಲಭ್ಯ, ಸರ್ವಜ್ಞತ್ವ, ಸರ್ವಶಕ್ತಿತ್ವ, ಸತ್ಯಸಂಕಲ್ಪತ್ವ, ಪರಮಕಾರುಣಿಕತ್ವ, ಕೃತಜ್ಞತ್ವ, ಸ್ಥಿರತ್ವ, ಪರಿಪೂರ್ಣತ್ವ, ಪರಮೋದಾರತ್ವ ಮುಂತಾದ ಗುಣಗಳನ್ನು ಮುಖ್ಯವಾಗಿ ಅನುಸಂಧಾನ ಮಾಡಬೇಕೆಂದು ತಿಳಿಸಿದೆ. ಇದನ್ನೆಲ್ಲಾ ಈ ಶ್ಲೋಕದ ಪೂವಾರ್ಧದಲ್ಲಿ ಅನುಸಂಧಾನ ಮಾಡಬೇಕು. ಉಪಾಯ ವಿಶೇಷವನ್ನೂ ತತ್ತ್ವವಿಶೇಷವನ್ನೂ ಸಹ ಇಲ್ಲಿಯೇ ತಿಳಿಸಿದ್ದಾರೆ. ಫಲ ವಿಶೇಷದ ನಿರೂಪಣೆ ಉತ್ತರಾರ್ಧದಲ್ಲಿದೆ.

**ಜಂತೋರಮುಷ್ಯ ಜನನೇ ವಿಧಿಶಂಭುದೃಷ್ಟ್ಯಾ**
**ರಾಗಾದಿನೇವ ರಜಸಾ ತಮಸಾ ಚ ಯೋಗಃ ।**
**ದ್ವೈಪಾಯನಪ್ರಭೃತಯಸ್ತ್ವದವೇಕ್ಷಿತಾನಾಂ**
**ಸತ್ತ್ವಂ ವಿಮುಕ್ತಿನಿಯತಂ ಭವತೀತ್ಯಶಂತಿ** ॥೧೩॥

(ಅಮುಷ್ಯಜಂತೋಃ) ಅನಾದಿಕಾಲದದಿಂದ ಸಂಸಾರದಲ್ಲಿ ಸುತ್ತುತ್ತಿರುವ ಈ ಜೀವನ, (ಜನನೇ) ಜನ್ಮಕಾಲದಲ್ಲಿ(ವಿಧಿಶಂಭುದೃಷ್ಟ್ಯಾ) ಬ್ರಹ್ಮರುದ್ರದೇವರ ಕಟಾಕ್ಷವು ಅವನ ಮೇಲೆ ಬಿದ್ದುದಾದರೆ, (ರಾಗಾದಿನೇವ) ರಂಜಕದ್ರವ್ಯದಿಂದ ಹೇಗೋಹಾಗೆ, (ರಜಸಾತಮಸಾಚ) ರಜೋಗುಣ

ಮತ್ತು ತಮೋಗುಣಗಳೊಡನೆ, (ಯೋಗಃ) ದೃಢತರವಾದ ಸಂಬಂಧ ವುಂಟಾಗುವುದು. ಆದರೆ, (ತ್ವದವೇಕ್ಷಿತಾನಾಂ) ಜನ್ಮಕಾಲದಲ್ಲಿ ನಿನ್ನಿಂದ ಕಟಾಕ್ಷಿಸಲ್ಪಟ್ಟವರಿಗೆ, (ವಿಮುಕ್ತಿನಿಯತಂ) ಮೋಕ್ಷವು ಖಂಡಿತವಾಗಿ ಉಂಟಾಗುವ, (ಸತ್ಯಂ) ಸತ್ತ್ವಗುಣ ಪೌಷ್ಕಲ್ಯವು, (ಭವತೀತಿ) ಉಂಟಾಗು ವುದೆಂದು, (ದ್ವೈಪಾಯನಪ್ರಭೃತಯಃ) ವೇದವ್ಯಾಸರೇ ಮೊದಲಾದವರು, (ಉಶಂತಿ) ಹೇಳುತ್ತಾರೆ.

ಭಗವಂತನ ಕಟಾಕ್ಷವು ನಮ್ಮಲ್ಲಿ ಸಾತ್ವಿಕತೆಯನ್ನುಂಟುಮಾಡು ತ್ತದೆ. ಅವನನ್ನುಳಿದು ನಮ್ಮನ್ನು ರಕ್ಷಿಸುವವರಿಲ್ಲ. ಎಂದಮೇಲೆ ನಾವು ಮತ್ತಾರಲ್ಲಿ ಹೋಗಿ ಬೇಡಬಲ್ಲೆವು? ಆದುದರಿಂದ ಪರಮಕರುಣಾಕರನಾದ ಅವನನ್ನೇ ನಾವು ಮರೆಹೋಗುತ್ತೇವೆ.

**ಕರ್ಮಸ್ವನಾದಿವಿಷಮೇಷು ಸಮೋ ದಯಾಳುಃ**
**ಸ್ವೇನೈವ ಕ್ಲೃಪ್ತಮಪದೇಶಮವೇಕ್ಷಮಾಣಃ ।**
**ಸ್ವಪ್ರಾಪ್ತಯೇ ತನುಭೃತಾಂ ತ್ವರಸೇ ಮುಕುಂದ**
**ಸ್ವಾಭಾವಿಕಂ ತವ ಸುಹೃತ್ತ್ವಮಿದಂ ಗೃಣಂತಿ ॥೧೪॥**

(ಅನಾದಿವಿಷಮೇಷು) ಅನಾದಿಯಾಗಿ ವಿಷಮವಾಗಿರುವ, (ಕರ್ಮಸು) ಚೇತನರ ಪುಣ್ಯಪಾಪರೂಪವಾದ ಕರ್ಮಗಳಲ್ಲಿ, (ಸಮಃ) ವೈಷಮ್ಯವಿಲ್ಲದ ವನೂ (ದಯಾಳುಃ) ದಯಾಶಾಲಿಯಾದವನೂ, (ಸ್ವೇನೈವಕ್ಲೃಪ್ತಂ) ತನ್ನಿಂದಲೇ ನಿಯಮಿಸಲ್ಪಟ್ಟ, (ಅಪದೇಶಂ) ವ್ಯಾಜವಾದ ಭಕ್ತಿ ಪ್ರಪತ್ತಿ ಗಳನ್ನೂ, (ಅವೇಕ್ಷಮಾಣಃ) ಪ್ರತೀಕ್ಷಿಸುತ್ತಿರುವವನೂ ಆದವನಾಗಿ, (ಮುಕುಂದ) ಎಲೈ ಮುಕುಂದನೇ, (ತನುಭೃತಾಂ) ಜೀವರುಗಳು (ಸ್ವಪ್ರಾಪ್ತಯೇ) ನಿನ್ನನ್ನು ಪಡೆದುಕೊಳ್ಳುವ ಲಾಭಕ್ಕಾಗಿ, (ತ್ವರಸೇ) ನೀನು ಆತುರಪಡುತ್ತೀಯೆ. (ತವ) ಕರುಣಾಳುವಾದ ನಿನ್ನ, (ಇದಂ ಸುಹೃತ್ತ್ವಂ) ಈ ಮೈತ್ರಿಯನ್ನು, (ಸ್ವಾಭಾವಿಕಂ) ಸಹಜವಾದುದೆಂದು, (ಗೃಣಂತಿ) ಜ್ಞಾನಿಗಳು ಕೊಂಡಾಡುತ್ತಾರೆ.

ಭಗವಂತನು ಸರ್ವಸಮನೆಂಬ ಬಿರುದಿಗೆ ಪಾತ್ರನಾಗಿದ್ದಾನೆ. ಚೇತನ

ರಲ್ಲಿ ಅಪಾರವಾದ ಅನುಕಂಪೆ ಅವನಿಗಿದೆ. ನಮ್ಮನ್ನು ಸೇರಲು ಅವನೂ ಕಾತರನಾಗಿದ್ದಾನೆ. ಆದರೆ ನಾವು ಅವನನ್ನು ಅರಿಸಿಕೊಳ್ಳಲು ತಡಮಾಡುತ್ತಿದ್ದೇವೆ. ನಿನಗೆ ಬೇಕಾದುದೇನು ಎಂದು ಅವನು ಕೇಳಿದಾಗ ಕ್ಷುದ್ರ ಫಲಗಳನ್ನೇ ಕೇಳಿ ಅವನನ್ನು ಬೇಡದೇ ಇರುವುದನ್ನು ಕಂಡು ಅವನು ನಗುತ್ತಿದ್ದಾನೆ. ಅವನು ನಮಗೆ ಸಹಜ ಸುಹೃತ್ತಾದುದರಿಂದಲೇ ನಾವು ಅವನನ್ನೇ ಆಶ್ರಯಿಸಿ ಬೇಡುತ್ತೇವೆ. ನಮ್ಮ ಸಕಲಾಪರಾಧಗಳನ್ನೂ ಕ್ಷಮಿಸಿ ಬಿಡುವ ಉದಾರನವನು. ಕೈಮುಗಿದು ಬೇಡಿದ ಮಾತ್ರಕ್ಕೇ ಕೋರಿದುದನ್ನು ಕರುಣಿಸುವ ಮಹಾಮಹಿಮನವನು. ಆದುದರಿಂದ ಅವನೇ ನಮಗೆ ಗತಿ ಎಂದು ತಿಳಿದು ಅವನಲ್ಲಿ ಶರಣಾಗತಿ ಮಾಡಬೇಕಾಗಿದೆ.

**ನಿದ್ರಾಯಿತಾನ್ನಿಗಮವರ್ತ್ಮನಿ ಚಾರುದರ್ಶೀ**
**ಪ್ರಸ್ಥಾನಶಕ್ತಿಸಹಿತಾನ್ಪ್ರತಿಬೋಧ್ಯ ಜಂತೂನ್ ।**
**ಜೀರ್ಣಸ್ತನಂಧಯಜಡಾಂಧಮುಖಾನಿವಾಸ್ಮಾ**
**ನ್ನೇತುಂ ಮುಕುಂದ ಯತಸೇ ದಯಯಾ ಸಹತ್ವಂ ॥೧೫॥**

(ಮುಕುಂದ) ಮುಕುಂದನೇ, (ನಿಗಮವರ್ತ್ಮನಿ) ವೇದಮಾರ್ಗದಲ್ಲಿ, (ನಿದ್ರಾಯಿತಾನ್) ನಿದ್ದೆಹೋದವರೂ ಆದರೆ, (ಪ್ರಸ್ಥಾನಶಕ್ತಿಸಹಿತಾನ್) ಪ್ರಯಾಣಮಾಡಲು ಶಕ್ತಿಯುಳ್ಳವರೂ ಆದ, (ಜಂತೂನ್) ಚೇತನರಾದ ನಮ್ಮನ್ನು, (ಚಾರುದರ್ಶೀ ತ್ವಂ) ದೋಷಗಳ ಮಧ್ಯೆ ಗುಣೈಕದೃಷ್ಟಿಯಾದ ನೀನು, (ಪ್ರತಿಬೋಧ್ಯ) ಎಚ್ಚರಿಸಿ, (ಜೀರ್ಣಸ್ತನಂಧಯ ಜಡಾಂಧಮುಖಾನಿವ ಅಸ್ಮಾನ್) ಅತಿ ವೃದ್ಧರು ಎಳೆಯ ಶಿಶುಗಳು ಉನ್ಮತ್ತರು ಕುರುಡರು ಮುಂತಾದವರನ್ನು ಹೇಗೋ ಹಾಗೆ ನಮ್ಮನ್ನು, (ದಯಯಾ ಸಹ) ದಯೆಯಿಂದ ಕೂಡಿದವನಾಗಿ, (ನೇತುಂ) ಕರೆದೊಯ್ಯಲು (ಯತಸೇ) ಯತ್ನಿಸುತ್ತೀಯೆ.

ಭಗವಂತನ ರಕ್ಷಣಾಪ್ರಕಾರವನ್ನಿಲ್ಲಿ ಸೂಚಿಸಲಾಗಿದೆ. ಗಮನಶಕ್ತಿಯಿದ್ದು ಸಾಧನೆಯ ಮಾರ್ಗದಲ್ಲಿ ನಡೆಯುತ್ತಿರುವವರು ನಿದ್ದೆಹೋದ ವೇಳೆಯಲ್ಲಿ ಅವರನ್ನೆಬ್ಬಿಸಿ ಗುರಿಯಕಡೆಗೆ ಕರೆದೊಯ್ಯುವವನು ಭಗವಂತನೇ. ಹಾಗೆಯೇ ಗಮನಶಕ್ತಿಯೂ ಇಲ್ಲದ ಅಶಕ್ತರನ್ನು ತಾನೇ ಗುರಿಯೆಡೆಗೆ

ಸೆಳೆದುಕೊಂಡು ಹೋಗುವವನೂ ಅವನೇ. ಆದರೆ ಅದಕ್ಕಾಗಿ ಅವನಲ್ಲಿ ನಾವು ಬೇಡಬೇಕು. ನಾವೇನನ್ನು ಬೇಡಿದರೆ ಅದನ್ನು ಅವನು ಕರುಣಿಸುವವನಾಗಿದ್ದಾನೆ. ಆದುದರಿಂದ ಆ ಮಹಾಮಹಿಮನಲ್ಲಿ ಶರಣು ಹೋಗುವುದೇ ನಮಗೆ ತಕ್ಕ ಉಪಾಯವಾಗಿದೆ.

ಮೋಕ್ಷಕ್ಕೆ ಮಾರ್ಗವನ್ನೂ ಭಗವಂತನೇ ತೋರಬೇಕೆಂದೂ ಅವನ ದಯೆಯೇ ನಮ್ಮನ್ನು ಕಾಪಾಡುವುದೆಂದೂ ತಿಳಿಸುತ್ತಾರೆ.

**ಭಕ್ತಿಃ ಪ್ರಪತ್ತಿರಥವಾ ಭಗವಂಸ್ತದುಕ್ತಿ-**
**ಸ್ತನ್ನಿಷ್ಠಸಂಶ್ರಯ ಇತೀವ ವಿಕಲ್ಪ್ಯಮಾನಂ ।**
**ಯತ್ಕಿಂಚಿದೇಕಮುಪಪಾದಯತಾ ತ್ವಯೈವ**
**ತ್ರಾತಾಸ್ತರಂತ್ಯವಸರೇ ಭವಿನೋ ಭವಾಬ್ಧಿಂ ॥೧೬॥**

(ಭಗವನ್) ಭಗವಂತನೇ, (ಭಕ್ತಿಃ) ಭಕ್ತಿಯೋಗವೇನು, (ಪ್ರಪತ್ತಿಃ) ಸ್ವತಂತ್ರವಾದ ಶರಣಾಗತಿಯೇನು, (ತದುಕ್ತಿಃ) ಶರಣಾಗತಿ ಶಬ್ದದ ಉಚ್ಚಾರಣೆಯೇನು, (ತನ್ನಿಷ್ಠಸಂಶ್ರಯಃ) ಭಕ್ತಿಪ್ರಪತ್ತಿನಿಷ್ಠರಾದ ಮಹಾಪುರುಷರನ್ನು ಆಶ್ರಯಿಸುವುದೇನು, (ಇತಿ) ಹೀಗೆ (ವಿಕಲ್ಪ್ಯಮಾನಂ) ವಿವಿಧವಾಗಿ ಕಲ್ಪಿಸಲ್ಪಟ್ಟಿರುವ (ಯತ್ಕಿಂಚಿದೇಕಂ) ಯಾವುದಾದರೂ ಒಂದು ಉಪಾಯವನ್ನು, (ಉಪಪಾದಯತಾ) ಒದಗಿಸಿಕೊಡುವ, (ತ್ವಯೈವ) ನಿನ್ನಿಂದಲೇ, (ತ್ರಾತಾಃ) ಸಂರಕ್ಷಿಸಲ್ಪಟ್ಟ, (ಭವಿನಃ) ಸಂಸಾರಿಗಳು, (ಭವಾಬ್ಧಿಂ) ಸಂಸಾರಸಾಗರವನ್ನು, (ಅವಸರೆ) ಯುಕ್ತವಾದ ಕಾಲದಲ್ಲಿ, (ತರಂತಿ) ದಾಟುತ್ತಾರೆ.

ಆಚಾರ್ಯರು ಈ ಶ್ಲೋಕದಲ್ಲಿ ಉಪಾಯಪ್ರಕಾರವನ್ನು ನಿರೂಪಿಸಿದ್ದಾರೆ. ಭಗವಂತನು ನಮಗೆ ಹೇಗೆ ಪ್ರಾಪ್ಯನಾಗಿದ್ದಾನೆಯೋ ಹಾಗೆಯೇ ಅದನ್ನು ಸಾಧಿಸಿಕೊಡುವ ಉಪಾಯವೂ ಆಗಿದ್ದಾನೆ. ಹೀಗೆ ಭಗವಂತನು ನಮಗೆ ಸಿದ್ಧೋಪಾಯನಾಗಿ ಭಕ್ತಿಪ್ರಪತ್ತಿಗಳು ಅವನ ಪ್ರಸನ್ನತೆಯನ್ನು ಸಂಪಾದಿಸಿಕೊಡುವ ಮಾರ್ಗಗಳಾಗಿವೆ. ಈ ಶ್ಲೋಕದಲ್ಲಿ ಆಚಾರ್ಯರು ನಾಲ್ಕು ಉಪಾಯಗಳನ್ನು ಹೇಳಿದ್ದಾರೆ. ಭಕ್ತಿ, ಜ್ಞಾನಾನುಷ್ಠಾನಗಳಿಂದ

ಕೂಡಿದ ಸ್ವತಂತ್ರ ಪ್ರಪತ್ತಿ, ಶರಣಾಗತಿ ಶಬ್ದೋಚ್ಚಾರಣೆ ಮತ್ತು ಭಾಗವತ ಸಮಾಶ್ರಯಣ ಎಂಬುವೇ ಅವು. ಭಕ್ತಿಪ್ರಪತ್ತಿಗಳಂತೆ ಕೇವಲ ಶರಣಾಗತಿ ಶಬ್ದೋಚ್ಚಾರಣೆಯೂ ಉತ್ತಾರಕವೆಂದಿದ್ದಾರೆ.

ಪಾಪೀಯಸೋಽಪಿ ಶರಣಾಗತಿಶಬ್ದಭಾಜಃ
ನೋಪೇಕ್ಷಣಂ ಮಮ ತವೋಚಿತಮೀಶ್ವರಸ್ಯ ।
ತ್ವದ್ ಜ್ಞಾನಶಕ್ತಿಕರುಣಾಸು ಸತೀಷು ನೇಹ
ಪಾಪಂ ಪರಾಕ್ರಮಿತುಮರ್ಹತಿ ಮಾಮಕೀನಂ ॥

ಎಂದು ಹೇಳಿದಂತೆ ಕಡುಪಾಪಿಯಾದವನೂ ಭಗವಂತನಲ್ಲಿ ಬೇಡಿದರೆ ಭಗವಂತನು ಅವನನ್ನು ಸಂರಕ್ಷಿಸುತ್ತಾನೆ. 'ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ । ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ ॥' ಎಂದು ಆತನೇ ಭರವಸೆ ಕೊಟ್ಟಿದ್ದಾನೆ. ಹಾಗೆಯೇ ಮಹಾಪುರುಷಸಮಾಶ್ರಯವೂ ಸಹ—

ಪಶುರ್ಮನುಷ್ಯೋ ಪಕ್ಷೀವಾ ಯೇ ಚ ವೈಷ್ಣವಸಂಶ್ರಯಾಃ
ತೇ ನೈವ ತೇ ಪ್ರಯಾಸ್ಯಂತಿ ತದ್ವಿಷ್ಣೋಃ ಪರಮಂ ಪದಮ್ ॥

'ತೇ ವಯಂ ಭವತಾ ರಕ್ಷ್ಯಾಃ ಭವದ್ವಿಷಯವಾಸಿನಃ' ಮುಂತಾದ ಪ್ರಮಾಣಗಳು ಇದನ್ನು ತಿಳಿಸುತ್ತವೆ. ಶರಣಾಗತಿ ಕೇವಲ ವಾಚಕವಾಗಿ ಆದರೂ ಅದು ತನ್ನ ಪ್ರಭಾವವನ್ನು ಬೀರಿ ಸಾಧಕನಲ್ಲಿ ಪರಿವರ್ತನೆಯನ್ನುಂಟುಮಾಡಿ ಪೂರ್ಣವಾದ ಶರಣಾಗತಿಯನ್ನಾಗಿ ಮಾಡುತ್ತದೆ. ಆದ್ದರಿಂದ ಫಲಪ್ರದವಾಗುತ್ತದೆ. ಹಾಗೆಯೇ ಭಾಗವತ ಸಮಾಶ್ರಯಣವೂ ಪರಂಪರೆಯೂ ಉಪಾಯವಾಗುತ್ತದೆ. ಅಂತಹವರು ಸ್ವನಿಷ್ಠೆಯಿಂದಲಾಗಲಿ ಉಪಾಯದ ಸಂಬಂಧವನ್ನು ಪಡೆದವರಾಗಿ ಪ್ರಪತ್ತಿಯನ್ನನುಷ್ಠಿಸಿ ಭಗವತ್ಪ್ರಾಪ್ತಿಯಲ್ಲಿ ತ್ವರೆಯನ್ನು ಪಡೆದವರಾಗಿ ಸಮಾಕೃತರಾಗುವರು. ಇವರಿಗೆಲ್ಲ ರಕ್ಷಕನಾದ ಭಗವಂತನೇ ದಾರಿಯನ್ನು ತೋರುವವನು. ಅವರು ತಕ್ಕ ಕಾಲದಲ್ಲಿ ಸಂಸಾರವನ್ನು ದಾಟುವರು. ಎಂದರೆ ಭಕ್ತಿಯೋಗನಿಷ್ಠರು ಪ್ರಾರಬ್ಧ ಕರ್ಮವನ್ನನುಭವಿಸಿ ಮುಗಿಸಿದಮೇಲೆಯೂ ಸ್ವತಂತ್ರಪ್ರಪತ್ತಿನಿಷ್ಠರು ಆಯಾ ದೇಹದ ಅವಸಾನಕಾಲದಲ್ಲಿಯೂ ಅದರಲ್ಲಿಯೂ ಆರ್ತದೃಪ್ತರ ವ್ಯವಸ್ಥೆಗನುಸಾರವಾಗಿಯೂ ಮೋಕ್ಷ ಪಡೆಯುವರೆಂದು ಭಾವ. 'ತರತಿ ಶೋಕಮಾತ್ಮವಿತ್' ಮುಂತಾದುವನ್ನು ಇಲ್ಲಿ ಅನುಸಂಧಾನ ಮಾಡಬೇಕು.

**ನಾನಾವಿಧೈರಕಪಟೈರಜಹತ್ಸ್ವಭಾವೈ-**
**ರಪ್ರಾಕೃತೈರ್ನಿಜವಿಹಾರವಶೇನ ಸಿದ್ಧೈಃ ।**
**ಆತ್ಮೀಯರಕ್ಷಣವಿಪಕ್ಷವಿನಾಶನಾರ್ಥೈಃ**
**ಸಂಸ್ಥಾಪಯಸ್ಯನಘಜನ್ಮಭಿರಾದ್ಯಧರ್ಮಂ** ॥೧೭॥

(ನಾನಾವಿಧೈಃ) ದೇವ ಮನುಷ್ಯಾದಿ ಬಹುಪ್ರಕಾರಗಳಾದವೂ, (ಅಕಪಟೈಃ) ಸತ್ಯವಾದುವುಗಳಾದುವೂ, (ಅಜಹತ್ಸ್ವಭಾವೈಃ) ಶೇಷಿತ್ವ, ಶರಣ್ಯತ್ವ, ರಕ್ಷಕತ್ವ, ಭೋಗ್ಯತ್ವವೇ ಮೊದಲಾದ ಸ್ವಭಾವವನ್ನು ಕಳೆದು ಕೊಳ್ಳದಿರುವುದೂ, (ಅಪ್ರಾಕೃತೈಃ) ಪಾಂಚಭೌತಿಕವಲ್ಲದವೂ, (ನಿಜವಿಹಾರ ವಶೇನ ಸಿದ್ಧೈಃ) ಕೇವಲ ಕ್ರೀಡಾರ್ಥವಾಗಿ ಸ್ವೀಕರಿಸಲ್ಪಟ್ಟವೂ, (ಆತ್ಮೀಯ ರಕ್ಷಣವಿಪಕ್ಷವಿನಾಶನಾರ್ಥೈಃ) ಸಾಧುಸಂರಕ್ಷಣೆ ಹಾಗೂ ದುಷ್ಕೃದ್ವಿನಾಶ ವನ್ನೇ ಪ್ರಯೋಜನಾರ್ಥವಾಗಿ ಉಳ್ಳವೂ ಆದ, (ಅನಘಜನ್ಮಭಿಃ) ಸರ್ವ ದುಃಖಹರವೂ ಪವಿತ್ರವೂ ಆದ ಅವತಾರಗಳಿಂದ, (ಆದ್ಯ ಧರ್ಮಂ) ಸರ್ವ ಕಾರಣಭೂತವಾದ ಧರ್ಮವನ್ನು, (ಸಂಸ್ಥಾಪಯಸಿ) ನೀನು ಸಂಸ್ಥಾಪನೆ ಮಾಡುತ್ತೀಯೆ.

ಹಿಂದಿನ ಶ್ಲೋಕಗಳಲ್ಲಿ ಭಗವಂತನು ಪರವ್ಯೂಹ ಹಾಗೂ ಅಂತರ್ಯಾಮಿ ವ್ಯೂಹಗಳಲ್ಲಿ ರಕ್ಷಣೆ ಮಾಡುವುದನ್ನು ತಿಳಿಸಲಾಯಿತು. ಈ ಶ್ಲೋಕದಲ್ಲಿ ಆತನು ಇತರ ಸಜಾತೀಯನಾಗಿ ಅವತರಿಸಿಯೂ ರಕ್ಷಣೆ ಮಾಡುವ ವಿಧಾನವನ್ನು ವಿವರಿಸಿದ್ದಾರೆ. ತನ್ನ ಕಾರುಣ್ಯವನ್ನೂ ತಾನು ರಕ್ಷಿಸುವುದನ್ನೂ ಕಂಡು ತನ್ನ ಜನ ತನ್ನಲ್ಲಿ ಶ್ರದ್ಧೆಯನ್ನು ಹೊಂದಲೆಂದು ಭಗವಂತನು ನಮಗೆ ತೋರಿಬರುತ್ತಾನೆ ಎಂದು ಇಲ್ಲಿ ವರ್ಣಿಸಿದ್ದಾರೆ.

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥

ಎಂದು ಹೇಳಿರುವಂತೆ ಭಗವಂತನು ಧರ್ಮಕ್ಕೆ ಅಪಾಯ ಸಂಭವಿಸಿದ ಕಾಲದಲ್ಲಿ ಧರ್ಮಸಂಸ್ಥಾಪನೆಗಾಗಿ ಅವತರಿಸುತ್ತಾನೆ. ಪರಮಕರುಣಾಳು ವಾದ ಅವನು ತನ್ನ ಪರಮಭಕ್ತರಿಗೆ ತನ್ನ ಅಂತರಂಗಸಂಬಂಧವನ್ನಿತ್ತು ಸಂತೋಷಪಡಿಸಲು ತಾನೇ ಈ ಲೋಕದಲ್ಲಿ ದೇವಮನುಷ್ಯಾದಿ ರೂಪದಿಂದ ಜನಿಸುತ್ತಾನೆ ಮತ್ತು ಧರ್ಮಸಂರಕ್ಷಣೆ ಮಾಡುತ್ತಾನೆ.

ಅವತಾರಕಾಲದಲ್ಲಿ ಭಗವಂತನು ತಾನೇ ಇತರರನ್ನು ಆಶ್ರಯಿಸು ವುದಕ್ಕೆ ಅವನ ಸೌಶೀಲ್ಯವೇ ಕಾರಣವೆಂದು ಮುಂದೆ ತಿಳಿಸುತ್ತಾರೆ.

**ನಿಮ್ನೋನ್ನತಾನಿ ನಿಖಿಲಾನಿ ಪದಾನಿ ಗಾಢಂ**
**ಮಜ್ಜಂತಿ ತೇ ಮಹಿಮಸಾಗರಶೀಕರೇಷು ।**
**ನೀರಂಧ್ರಮಾಶ್ರಯಸಿ ನೀಚಜನಾಂಸ್ತಥಾಪಿ**
**ಶೀಲೇನ ಹಂತ ಶಿಶಿರೋಪವನೇಶ್ವರ ತ್ವಂ** ॥೧೪॥

(ತೇ) ಅಪರಿಚ್ಛಿನ್ನವಾದ ಸ್ವರೂಪ ಸ್ವಭಾವಗುಣಗಳನ್ನುಳ್ಳ ನಿನ್ನ, (ಮಹಿಮಸಾಗರ ಶೀಕರೇಷು) ಮಹಿಮೆಯೆಂಬ ಸಾಗರದ ತುಂತುರು ಹನಿಗಳಲ್ಲಿ, (ನಿಮ್ನೋನ್ನತಾನಿ) ಉಚ್ಚನೀಚಗಳಾದ, (ನಿಖಿಲಾನಿಪದಾನಿ) ಬ್ರಹ್ಮರುದ್ರಾಧಿಷ್ಠಿತಗಳಾದ ಸಕಲ ಸ್ಥಾನಗಳೂ, (ಗಾಢಂ) ಭದ್ರವಾಗಿ, (ಮಜ್ಜಂತಿ) ಮುಳುಗಿಹೋಗುತ್ತವೆ. (ತಥಾಪಿ) ಇಂತಹ ಸರ್ವಾತಿಶಾಯಿ ಯಾದ ಮಹಿಮೆಯುಳ್ಳವನಾಗಿದ್ದರೂ (ಶಿಶಿರೋಪವನೇಶ್ವರ) ಎಲ್ಲೈ ಶೀತಲಾ ರಾಮ ಪ್ರಭುವೇ, (ತ್ವಂ) ಸರ್ವಶ್ರೇಷ್ಠಿಯಾಗಿ ಸರ್ವಸ್ಮಾತ್ಪರನಾದ ನೀನು, (ಶೀಲೇನ) ನಿನ್ನ ಪರಮ ಸೌಶೀಲ್ಯದ ಕಾರಣ, (ನೀಚಜನಾನ್) ಅತಿ ಮಂದರಾದ ವಾನರರು ಗೋಪಾಲರು ಮುಂತಾದವರನ್ನು, (ನೀರಂಧ್ರಂ) ನಿನ್ನ ಮಹಿಮೆಯನ್ನೆಣಿಸದೆ ಗಾಢವಾಗಿ, (ಆಶ್ರಯಿಸಿ) ಆಶ್ರಯಿಸುತ್ತೀಯೆ. (ಹಂತ) ಆಶ್ಚರ್ಯ !!

ಈ ಶ್ಲೋಕದಲ್ಲಿ ಆಚಾರ್ಯರು ಅವತಾರಪ್ರಯುಕ್ತವಾದ ಸೌಶಿಲ್ಯ ವನ್ನು ಅನುಸಂಧಾನ ಮಾಡುತ್ತಾರೆ. ಭಗವಂತನ ಮಹಿಮೆ ಅಪಾರ ವಾದುದು. ಇದನ್ನೇ ಆಚಾರ್ಯ ಯಾಮುನರು 'ತತ್ತ್ವೇನ ಯಸ್ಯ ಮಹಿಮಾರ್ಣವ ಶೀಕರಾಣುಃ ಶಕ್ಯೋ ನ ಮಾತುಮಪಿ ಶರ್ವಪಿತಾ ಮಹಾದ್ಯೈಃ' 'ಕಸ್ಯಾಯುತಾಯುತ ಶತೈಕಕಲಾಂಶಕಾಂಶೇ ವಿಶ್ವಂ ವಿಚಿತ್ರ ಚಿದಚಿತ್ರವಿಭಾಗವೃತ್ತಂ' ಎಂದು ಅನುಭವಿಸಿದ್ದಾರೆ. ಮಹಿಮೆಯನ್ನು ಸಾಗರ ಎಂದು ರೂಪಣಮಾಡಿರುವುದರಿಂದ ಮಹಿಮೆಯ ಅಪರಿಚ್ಛೇದ್ಯತ್ವ ವನ್ನು ಸೂಚಿಸಿದೆ. ಇಷ್ಟು ಅಪಾರವಾದ ಮಹಿಮೆಯುಳ್ಳವನಾದರೂ ತಾನೇ ಸರ್ವಾಶ್ರಯನಾಗಿದ್ದರೂ ತನ್ನ ಸೌಶೀಲ್ಯದ ಪರಾಕಾಷ್ಠೆಯಿಂದ ಇತರರನ್ನು

ಆಶ್ರಯಿಸುತ್ತಾನೆ. ತನ್ನ ಅವತಾರಕಾಲದಲ್ಲಿ 'ಗುಹೇನ ಸಹಿತೋ ರಾಮಃ' 'ಲೋಕನಾಥಃ ಪುರಾಭೂತ್ವಾ ಸುಗ್ರೀವಂ ನಾಥಮಿಚ್ಛತಿ', 'ಅಹಂವೋ ಬಾಂಧವೋ ಜಾತಃ', 'ಜ್ಞಾನವೃದ್ಧಾಸ್ತಪೋವೃದ್ಧಾಃ ಬಹವಃ ಪರ್ಯುಪಾಸಿತಾಃ', 'ಉಪಸ್ಥೇಯೈರುಪಸ್ಥಿತಃ' ಮುಂತಾದುವುಗಳನ್ನು ಇಲ್ಲಿ ಅನುಸಂಧಾನ ಮಾಡಬೇಕು. ಸೌಶೀಲ್ಯವೆಂಬ ಗುಣವನ್ನು 'ಮಹತೋ ಮಂದೈಸ್ಸಹ ನೀರಂಧ್ರೇಣ ಸಂಶ್ಲೇಷಸ್ವಭಾವತ್ವಂ' ಎಂದು ವರ್ಣಿಸಿದ್ದಾರೆ. ಈಶ್ವರನಿವನು ಎಂಬ ಬುದ್ಧಿಯಿಂದ ಆಶ್ರಿತರಿಗೆ ಅವನಲ್ಲಿ ಸಂಕೋಚವುಂಟಾಗದಂತೆಯೂ, ಪರತ್ವವೆಂಬ ಬುದ್ಧಿಯಿಂದ ತಾನು ವಿಲಕ್ಷಣನೆಂಬ ಅರಿವು ತನಗೂ ಉಂಟಾಗದಿರುವಂತೆಯೂ ಭಗವಂತನು ಭಕ್ತರೊಡನೆ ಬೆರೆಯುವ ಗುಣವೇ ಸೌಶೀಲ್ಯ. ಸರ್ವಸ್ಮಾತ್ಪರನಾದ ರಾಮಚಂದ್ರನು ನಿಷಾದನಾದ ಗುಹನೊಡನೆ ನಡೆದುಕೊಂಡ ರೀತಿ ಅವನ ಸೌಶೀಲ್ಯವನ್ನು ಪ್ರಕಾಶಪಡಿಸುತ್ತದೆ.

**ಕಾಶೀವೃಕಾನ್ಧಕಶರಾಸನಬಾಣಗಙ್ಗಾ-**
**ಸಂಭೂತಿನಾಮಕೃತಿಸಂವದನಾದ್ಯುದನ್ತೈಃ ।**
**ಸ್ವೋಕ್ತ್ಯಮ್ಬರೀಷಭಯಶಾಪಮುಖೈಶ್ಚ ಶಮ್ಭುಂ**
**ತ್ವನ್ನಿಘ್ನಮೀಕ್ಷಿತವತಾಮಿಹ ಕಃ ಶರಣ್ಯಃ ॥೧೯॥**

(ಕಾಶೀ) ಕಾಶೀನಗರದ ವೃತ್ತಾಂತ, (ವೃಕ) ಭಸ್ಮಾಸುರ ವೃತ್ತಾಂತ, (ಅಂಧಕ) ಅಂಧಕಾಸುರನ ಚರಿತ್ರೆ, (ಶರಾಸನ) ವೈಷ್ಣವ ಧನುಸ್ಸಿನ ವೃತ್ತಾಂತ, (ಬಾಣ) ಬಾಣಾಸುರನ ವೃತ್ತಾಂತ, (ಗಂಗಾ) ಗಂಗಾ ವೃತ್ತಾಂತ, (ಸಂಭೂತಿ) ರುದ್ರನ ಜನ್ಮ ವೃತ್ತಾಂತ, (ನಾಮಕೃತಿ) ರುದ್ರನೆಂದು ಹೆಸರಿಟ್ಟ ವಿಚಾರ, (ಸಂವದನ) ಬ್ರಹ್ಮರುದ್ರರ ಸಂಭಾಷಣೆಯ ವಿಷಯ, (ಆದಿ) ಇತ್ಯಾದಿ, (ಉದಂತೈಃ) ಕತೆಗಳಿಂದಲೂ, (ಸ್ವೋಕ್ತಿಃ) ರುದ್ರವಚನಗಳು, (ಅಂಬರೀಷಭಯ) ಅಂಬರೀಷ ರಾಜನ ಪ್ರಸನ್ನತೆಯಿಂದುಂಟಾದ ಭಯನಿವಾರಣೆ, (ಶಾಪ) ಶಿವನಿಗೆ ಬ್ರಹ್ಮಕೊಟ್ಟ ಶಾಪ, (ಮುಖೈಶ್ಚ) ಮುಂತಾದವುಗಳಿಂದ, (ಶಂಭುಂ) ರುದ್ರದೇವನನ್ನು, (ತ್ವನ್ನಿಘ್ನಂ) ನಿನಗಧೀನವಾದ ಸ್ವರೂಪ ಸ್ಥಿತಿ ಪ್ರವೃತ್ತಿಗಳುಳ್ಳವನನ್ನಾಗಿ, (ಈಕ್ಷಿತವತಾಂ) ಕಂಡವರಿಗೆ, (ಶರಣ್ಯಃ ಕಃ) ನಿಜವಾದ ರಕ್ಷಕರು ಯಾರು?

ಭಗವದವತಾರಗಳಲ್ಲಿ ಭಗವಂತನು ಶಿವಲಿಂಗ ಪ್ರತಿಷ್ಠಾಪನೆ, ಕೈಲಾಸ ಯಾತ್ರೆ ಮೊದಲಾದ ರುದ್ರೋಪಾಸನೆಯನ್ನು ಮಾಡಿರುವಲ್ಲಿ ಅವನು ಸರ್ವ ಶರಣ್ಯನೆಂದು ಹೇಗೆ ಹೇಳುವುದು ಎಂಬ ಆಕ್ಷೇಪಕ್ಕೆ ಇಲ್ಲಿ ಉತ್ತರವನ್ನು ಹೇಳಿದ್ದಾರೆ. ಶ್ರೀಮನ್ನಾರಾಯಣನೇ ಪರತತ್ವವೆಂದೂ ಬ್ರಹ್ಮರುದ್ರಾದಿಗಳು ಅವನಿಗಧೀನರೆಂದೂ ಶಾಸ್ತ್ರಗಳು ಹೇಳುತ್ತವೆ. ಉಪನಿಷತ್ತುಗಳು ಆ ಪರ ವಸ್ತುವನ್ನು ಸತ್, ಆತ್ಮಾ, ಆಕಾಶ, ಪ್ರಾಣ, ಜ್ಯೋತಿ, ಪುರುಷ ಎಂದೆಂದೂ ಕೊಂಡಾಡುತ್ತದೆ. ಇವೆಲ್ಲ ಹೆಸರುಗಳೂ ಪುರುಷೋತ್ತಮನಾದ ನಾರಾಯಣ ನಲ್ಲಿ ಪರ್ಯವಸಾನವಾಗುತ್ತವೆ. ಸರ್ವಕಾರಣಕಾರಣನೂ ಸರ್ವರಕ್ಷಕನೂ ಸರ್ವನಿಯಾಮಕನೂ ಆದವನು ಶ್ರೀಮನ್ನಾರಾಯಣನು. ಭಗವಂತನು ಅವತಾರ ಕಾಲದಲ್ಲಿ ಲೀಲಾರ್ಥವಾಗಿ ರುದ್ರಪುರಸ್ಕಾರವನ್ನೂ ಮಾಡಿದ್ದಾನೆ. ಇದರಿಂದ ಅವನ ಸರ್ವಶೇಷಿತ್ವಕ್ಕೆ ಎಳ್ಳಷ್ಟೂ ಕುಂದಿಲ್ಲವೆಂಬುದನ್ನು ಇತಿ ಹಾಸ ಪುರಾಣಾದಿಗಳಲ್ಲಿ ಬರುವ ಅನೇಕಾನೇಕ ವೃತ್ತಾಂತಗಳಿಂದ ಇಲ್ಲಿ ತೋರಿಸಿದ್ದಾರೆ. ಶ್ರೀಮನ್ನಾರಾಯಣನೇ ಪರದೇವತೆಯೆಂಬ ಪಾರಮಾರ್ಥ್ಯ ವನ್ನೂ ಮನಗಾಣಿಸಿದ್ದಾರೆ.

**ಕ್ವಾಸೌ ವಿಭುಃ ಕ್ವ ವಯಮಿತ್ಯುಪಸತ್ತಿಭೀತಾನ್**
**ಜನ್ತೂನ್ ಕ್ಷಣಾತ್ತ್ವದನುವೃತ್ತಿಷು ಯೋಗ್ಯಯನ್ತೀ ।**
**ಸಂಪ್ರಾಪ್ತಸದ್ಗುರುತನೋಃ ಸಮಯೇ ದಯಾಳೋ-**
**ರಾತ್ಮಾವಧಿರ್ಭವತಿ ಸಂಸ್ಕೃತಧೀಃ ಕ್ಷಣಂ ತೇ ॥೨೦॥**

(ಅಸೌಪ್ರಭುಃ ಕ್ವ) ಸರ್ವಸ್ಮಾತ್ಪರನೂ ಮಹದೈಶ್ವರ್ಯಶಾಲಿಯೂ ಆದ ಈ ಜಗತ್ಪ್ರಭು ಎಲ್ಲಿ? (ವಯಂ ಕ್ವ) ಅಜ್ಞರೂ ಅಶಕ್ತರೂ ಆದ ನಾವೆಲ್ಲಿ? (ಇತಿ) ಹೀಗೆಂದು, (ಉಪಸತ್ತಿ ಭೀತಾನ್) ಹತ್ತಿರ ಬಂದು ಆಶ್ರಯಿಸಲು ಬೆದರುವ, (ಜಂತೂನ್) ಚೇತನರನ್ನು, (ಕ್ಷಣಾತ್) ಆ ಕ್ಷಣ ದಲ್ಲಿ, [ಅವರ ಆ ಸ್ಥಿತಿಯಲ್ಲಿಯೇ] (ತ್ವದನುವೃತ್ತಿಷು) ಮಹಾನುಭಾವನಾದ ನಿನ್ನ ಕೈಂಕರ್ಯ ವಿಷಯದಲ್ಲಿ, (ಯೋಗ್ಯಯಂತೀ) ಯೋಗ್ಯರನ್ನಾಗಿ ಮಾಡ ತಕ್ಕುದೂ, (ಸಮಯೇ) ಸಂಕಲ್ಪ ಮಾಡಿದ ಸಮಯದಲ್ಲಿಯೇ, (ಸಂಪ್ರಾಪ್ತ ಸದ್ಗುರುತನೋಃ) ಸದ್ಗುರುವಿನ ರೂಪದಿಂದ ಮೈದೋರಿದ, (ದಯಾಳೋಃ)

ದಯಾಮಯನಾದ (ತೇ) ನಿನ್ನ, (ಸಂನ್ಯತಧೀಃ) ಶಾಸ್ತ್ರಾನುಸಾರಿಯಾದ ಉಪದೇಶವು, (ಆತ್ಮಾವಧಿಃ ಭವತಿ) ಯಾವದಾತ್ಮಭಾವಿಯಾಗಿರುತ್ತದೆ.

ಭಗವಂತನು ಅವತಾರವನ್ನು ಮಾಡಿ ಚೇತನರನ್ನು ರಕ್ಷಿಸುವ ಬಗೆಯನ್ನು ತಿಳಿಸಲಾಯಿತು. ಈ ಶ್ಲೋಕದಲ್ಲಿ ದಯಾಮಯನಾದ ದೇವನು ಗುರುವಿನ ರೂಪದಲ್ಲಿ ನಿಂತು ಹೇಗೆ ರಕ್ಷಣೆ ಮಾಡುವನೆಂಬುದನ್ನು ವಿವರಿಸಿದೆ.

ಒಬ್ಬ ಚೇತನನು ಮುಕ್ತಿಯನ್ನು ಪಡೆದು ಭಗವಂತನ ನಿತ್ಯ ಕೈಂಕರ್ಯದ ಮಹಾನಂದದಲ್ಲಿ ಭಾಗಿಯಾಗಲು ಅವನು ಆಚಾರ್ಯರನ್ನಾಶ್ರಯಿಸುವುದೇ ಮುಖ್ಯವಾದ ಸಾಧನ. ಭಗವಂತನೇ ಚೇತನರ ಮೇಲಿನ ದಯೆಯಿಂದ ಅವರ ಉದ್ಧಾರಕ್ಕಾಗಿ ಆಚಾರ್ಯರುಗಳ ಮೂಲಕ ಸದಸದ್ವಿವೇಕವನ್ನುಂಟುಮಾಡಿ ಸಂರಕ್ಷಿಸುತ್ತಾನೆಂದೂ 'ಸಾಕ್ಷಾನ್ನಾರಾಯಣೋ ದೇವಃ ಕೃತ್ವಾ ಮರ್ತ್ಯಮಯೀಂ ತನುಮ್ | ಮಗ್ನಾನುದ್ಧರತೇ ಲೋಕಾನ್ ಕಾರುಣ್ಯಾಚ್ಛಾಸ್ತ್ರಪಾಣಿನಾ ||" ಎಂದೂ ಹೇಳಲಾಗಿದೆ. ಭಗವದವತಾರಗಳಿಂದ ಆಗದ ಚೇತನೋದ್ಧಾರ ಆಚಾರ್ಯ ಮುಖೇನ ಆಗುತ್ತದೆ. 'ಅವಜಾನಂತಿ ಮಾಂ ಮೂಢಾಃ ಮಾನುಷೀಂ ತನುಮಾಶ್ರಿತಮ್' ಎಂದು ಕೃಷ್ಣ ಭಗವಾನನೇ ಹೇಳಿದ್ದಾನೆ. ಹೀಗಿರಲು ಗೋವಿಂದನಲ್ಲಿ ಪರಾಙ್ಮುಖಚಿತ್ತರಾದ ಚೇತನರಲ್ಲಿ ಶಾಸ್ತ್ರೋಪದೇಶದ ಮೂಲಕ ವಿವೇಕವನ್ನುಂಟುಮಾಡಿ ಭಗವದಾನುಕೂಲ್ಯವನ್ನುಂಟುಮಾಡುವವರು ಆಚಾರ್ಯರುಗಳು. 'ಪತಿಂ ವಿಶ್ವಸ್ಯಾತ್ಮೇಶ್ವರಂ' 'ಭೀಷಾಸ್ಮಾದ್ವಾತಃಪವತೇ | ಭೀಷೋದೇತಿ ಸೂರ್ಯಃ| ಭೀಷಾಸ್ಮಾದಗ್ನಿಶ್ಚೇಂದ್ರಶ್ಚ | ಮೃತ್ಯುರ್ಧಾವತಿ ಪಂಚಮ ಇತಿ |' 'ಕ ಇತ್ಥಾ ವೇದ ಯತ್ರ ಸಃ', 'ಪುರುಷಾನ್ನಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾಗತಿಃ', 'ನಮೇ ವಿದುಃ ಸುರಗಣಾಃ,' ಎಂಬಂತೆ ಭಗವಂತನು ಸರ್ವಸ್ಮಾತ್ಪರನೂ ಸರ್ವಭಯಂಕರನೂ ದುರ್ವಿಜ್ಞೇಯಸ್ವರೂಪನೂ ಆಗಿದ್ದಾನೆ. ಪರವ್ಯೂಹಾದಿ ರೂಪದಲ್ಲಿರುವ ಈ ಪರಮಾತ್ಮನನ್ನು ನಾವು ಹೇಗೆ ಒಲಿಸಿಕೊಳ್ಳುವುದು ಎಂದು ಹಿಂಜರಿದ ಚೇತನರಿಗೆ ಆಚಾರ್ಯರುಗಳು ಪರಮಕೃಪೆಯಿಂದ ಸ್ವಸ್ವರೂಪ ಪರಸ್ವರೂಪಾದಿಗಳನ್ನು ಉಪದೇಶಿಸಿ ಭಗವಂತನ ನಿತ್ಯ ಕೈಂಕರ್ಯವೇ ಜೀವರುಗಳ ಸ್ವರೂಪವೆಂಬುದನ್ನು ತಿಳಿಸಿ ಆತನನ್ನು ಪಡೆಯಲು ಅನುಸಂಧಾನಂತೆ ಮಾಡುತ್ತಾರೆ. ಸರ್ವಶರೀರಿಯೂ ಸರ್ವಶೇಷಿಯೂ

ಆದ ಭಗವಂತನಿಗೂ ಅವನಿಗೆ ಶೇಷಭೂತರಾದ ನಮಗೂ ಇರುವ ಸ್ವಸ್ವಾಮಿ ಭಾವಸಂಬಂಧವನ್ನು ವಿಶದಪಡಿಸುತ್ತಾರೆ.

ತದಹಂ ತ್ವದೃತೇನ ನಾಥವಾನ್ ಮದೃತೇ ತ್ವಂ ದಯನೀಯವಾನ್ ನಚ । ವಿಧಿ ನಿರ್ಮಿತದೇತದನ್ವಯಂ ಭಗವನ್ ಪಾಲಯ ಮಾಸ್ಮಜೀಹಪಃ,' ಎಂದು ಬೇಡುವಂತೆ ಮಾಡುತ್ತಾರೆ. ಹೀಗೆ ಆಚಾರ್ಯರುಗಳಲ್ಲಿ ನಿಂತು ಚೇತನರನ್ನೂ ಸದುಪದೇಶ ಮಾಡಿ ರಕ್ಷಿಸುವವನು ಭಗವಂತನೇ. ಇದು ಅವನ ರಕ್ಷಣದ ರೀತಿ. 'ಆಚಾರ್ಯ : ಸಹರಿಃ ಸಾಕ್ಷಾತ್ ಚರರೂಪೀ ನ ಸಂಶಯಃ' ಎಂಬಂತೆ ಆಚಾರ್ಯನು ಭಗವದಂಶಸಂಭೂತನಾಗುತ್ತಾನೆ. 'ಸಂಸ್ಕೃತಧೀಃ' ಎಂಬುದರಿಂದ ಆಚಾರ್ಯನ ಉಪದೇಶ ಸಂಶಯವಿಪರ್ಯ ಗಳಿಲ್ಲದ ಶಾಸ್ತ್ರಕ್ಕೂ ಸಂಪ್ರದಾಯಕ್ಕೂ ತಕ್ಕುದಾಗಿದ್ದು ನಿತ್ಯವಾಗಿರುವು ದೆಂದು ತಿಳಿಯಬೇಕು. ಹೀಗೆ ಚೇತನೋದ್ಧಾರವನ್ನು ಮಾಡುವ ಭಗವಂತನ ಕಾರುಣ್ಯವನ್ನು ಇಲ್ಲಿ ಅನುಸಂಧಾನ ಮಾಡಿದ್ದಾರೆ.

**ಯೋಗ್ಯಂ ಯಮೈಶ್ಚ ನಿಯಮೈಶ್ಚ ವಿಧಾಯ ಚಿತ್ತಂ**
**ಸಂತೋ ಜಿತಾಸನತಯಾ ಸ್ವವಶಾಸುವರ್ಗಾಃ ।**
**ಪ್ರತ್ಯಾಹೃತೇಂದ್ರಿಯಗಣಾಃ ಸ್ಥಿರಧಾರಣಾಸ್ತ್ವಾಂ**
**ಧ್ಯಾತ್ವಾ ಸಮಾಧಿಯುಗಳೇನ ವಿಲೋಕಯಂತಿ ॥೨೧॥**

(ಯಮೈಶ್ಚ) ಅಹಿಂಸೆ ಮೊದಲಾದುವುಗಳಿಂದಲೂ, (ನಿಯಮೈಶ್ಚ) ತಪಸ್ಸು, ಸಂತೋಷ, ಆಸ್ತಿಕ್ಯ ಮುಂತಾದುವುಗಳಿಂದಲೂ (ಚಿತ್ತಂ) ಮನ ಸ್ಸನ್ನು, (ಯೋಗ್ಯಂ) ಯೋಗಕ್ಕೆ ಅರ್ಹವಾದವಾಗಿ, (ವಿಧಾಯ ಮಾಡಿ ಕೊಂಡು, (ಸಂತಃ) ಬ್ರಹ್ಮಜ್ಞರು, (ಜಿತಾಸನತಯಾ) ಸ್ವಸ್ತಿಕಾದಿ ಆಸನ ಗಳನ್ನು ಸ್ವಾಧೀನಪಡಿಸಿಕೊಂಡವರಾಗಿ, (ಸ್ವದಶಾಸುವರ್ಗಾಃ) ಪ್ರಾಣಾ ಯಾಮದಿಂದ, (ಪ್ರಾಣ)ವಾಯುಪಂಚಕವನ್ನೂ ಹತೋಟಿಗೊಳಪಡಿಸಿ, (ಪ್ರತ್ಯಾಹೃತೇಂದ್ರಿಯಗಣಾಃ) ವಿಷಯಗಳಿಂದ ಇಂದ್ರಿಯಗಳನ್ನು ಹಿಂತಿರು ಗಿಸಿದವರಾಗಿ, (ಸ್ಥಿರಧಾರಣಾಃ) ಆತ್ಮನಲ್ಲಿ ಮನಸ್ಸನ್ನು ನೆಲೆ ನಿಲ್ಲಿಸಿದ ವರಾಗಿ, (ತ್ವಾಂ) ವಿಗ್ರಹಗುಣವಿಭೂತಿವಿಶಿಷ್ಟನಾದ ನಿನ್ನನ್ನು, (ಧ್ಯಾತ್ವಾ) ಧ್ಯಾನಮಾಡುವವರಾಗಿ, (ಸಮಾಧಿಯುಗಳೇನ) ಸಾಲಂಬನ ನಿರಾಲಂಬನ

ಗಳೆಂಬ ಯೋಗಗಳಿಂದ, (ವಿಲೋಕಯಂತಿ) ಸಾಕ್ಷಾತ್ಕರಿಸಿಕೊಳ್ಳುತ್ತಾರೆ. ಸಮಾಧಿಯ ಮಹದಾನಂದವನ್ನು ಅನುಭವಿಸುವ ಯೋಗಿಯೂ ಸಹ ಭಗವಂತನಲ್ಲಿ ಶರಣಾಗತನಾಗಿಯೇ ಆ ಸುಖವನ್ನು ಪಡೆಯುವನೆಂದು ಇಲ್ಲಿ ನಿರೂಪಿಸಿದ್ದಾರೆ.

ಜಗತ್ಕಾರಣನಾದ ಭಗವಂತನನ್ನು ಉಪಾಸನೆಮಾಡಿ ಅವನ ಪ್ರಸನ್ನತೆಯನ್ನು ಪಡೆದವರೇ ಸಂಸಾರಮಂಡಲದಿಂದ ಮುಕ್ತರಾಗಿ ಅವನ ನಿತ್ಯಕೈಂಕರ್ಯದ ಪರಮಾನಂದವನ್ನು ಪಡೆಯುವರು. ಮುಕ್ತರಾಗಲಿಚ್ಛಿಸುವವರು ಅವನನ್ನೇ ಭಜಿಸಬೇಕು 'ತಮೇವಂ ವಿದ್ವಾನಮೃತ ಇಹ ಭವತಿ,' ಎಂದು ಇದನ್ನೇ ಶ್ರುತಿ ಹೇಳುತ್ತದೆ. ಈ ಶ್ಲೋಕದಲ್ಲಿ ಯೋಗಾನುಷ್ಠಾನ ಪ್ರಕಾರವನ್ನು ವಿವರಿಸಿದ್ದಾರೆ. ಅಷ್ಟಾಂಗಯೋಗವೆಂದು ಪ್ರಸಿದ್ಧವಾದ ಮಾರ್ಗದ ನಿರೂಪಣೆ ಇಲ್ಲಿದೆ. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ, ಸಮಾಧಿ ಎಂಬವುಗಳಲ್ಲಿ ಸಮಾಧಿಯು ಪ್ರಧಾನವಾದುದಾಗಿ-ಅಂಗಿಯಾಗಿ-ಉಳಿದುವು ಅಂಗಗಳಾಗಿವೆ. ಯಮ ಎಂಬುದು.

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಮಾರ್ಜವಂ ।
ಕ್ಷಮಾ ಧೃತಿಃ ಮಿತಾಹಾರಃ ಶೌಚಂಚೇತಿ ಯಮಾ ದಶ ॥

ಎಂದು ಹತ್ತುಬಗೆ. ಯೋಗಸೂತ್ರದಲ್ಲಿ 'ಅಹಿಂಸಾಸತ್ಯಾಸ್ತೇಯ ಬ್ರಹ್ಮಚರ್ಯಾಪರಿಗ್ರಹಾಃ ಯಮಾಃ' ಎಂದು ವರ್ಣಿಸಿದ್ದಾರೆ. ನಿಯಮವೆಂಬುದು-

ತಪಸ್ಸಂತೋಷಮಾಸ್ತಿಕ್ಯಂ ದಾನಮೀಶ್ವರಪೂಜನಂ ।
ಸಿದ್ಧಾಂತಶ್ರವಣಂಚೈವ ಹ್ರೀರ್ಮತಿಶ್ಚ ಜಪೋವ್ರತಮ್ ॥

ಏತೇಚ ನಿಯಮಾಃ ಪ್ರೋಕ್ತಾಃ ಎಂಬಂತಿದೆ. ಯೋಗಸೂತ್ರಕಾರರು 'ಶೌಚ ಸಂತೋಷ ತಪಃ ಸ್ವಾಧ್ಯಾಯೇಶ್ವರಪ್ರಣಿಧಾನಾನಿ ನಿಯಮಾಃ' ಎಂದಿದ್ದಾರೆ. ಯೋಗಯಾಜ್ಞವಲ್ಕ್ಯರು ಆಸನಗಳನ್ನು

ಸ್ವಸ್ತಿಕಂ ಗೋಮುಖಂ ಪದ್ಮಂ ವೀರಂ ಸಿಂಹಾಸನಂ ತಥಾ ।
ಭದ್ರಂ ಮುಕ್ತಾಸನಂ ಚೈವ ಮಯೂರಾಸನಮೇವಚ ॥

ಎಂದೂ ಯೋಗಸೂತ್ರಕಾರರು 'ಸ್ಥಿರಸುಖಮಾಸನಮ್' ಎಂದೂ

ವರ್ಣಿಸಿದ್ದಾರೆ. ಪ್ರಾಣಾಯಾಮವೆಂಬುದು ಪ್ರಾಣವಾಯುವನ್ನು ಹತೋಟಿಯಲ್ಲಿಡುವುದು.' ತಸ್ಮಿನ್‌ಸತಿ ಶ್ವಾಸಪ್ರಶ್ವಾಸಯೋಃ ಗತಿವಿಚ್ಛೇದಃ ಪ್ರಾಣಾಯಾಮಃ" ಎಂದು ಯೋಗಸೂತ್ರಕಾರರು ವಿವರಿಸಿದ್ದಾರೆ.

ಪ್ರತ್ಯಾಹಾರವನ್ನು 'ಸ್ವವಿಷಯಾಸಂಪ್ರಯೋಗೇ ಚಿತ್ತಸ್ವರೂಪಾನುಕಾರ ಇವ ಇಂದ್ರಿಯಾಣಾಂ ಪ್ರತ್ಯಾಹಾರಃ ಎಂದು ಯೋಗಸೂತ್ರಕಾರರು ಉಲ್ಲೇಖಿಸಿದ್ದಾರೆ.

ಇಂದ್ರಿಯಾಣಾಂ ಹಿ ಚರತಾಂ ವಿಷಯೇಷು ಸ್ವಭಾವತಃ।
ಬಲಾದಾಹರಣಂ ತೇಷಾಂ ಪ್ರತ್ಯಾಹಾರಸ್ಸ ಉಚ್ಯತೆ॥

ಎಂದೂ ವಿವೃತವಾಗಿದೆ.

ಧಾರಣಾ ಎಂಬುದನ್ನು 'ಯಮಾದಿಗುಣಯುಕ್ತಸ್ಯ ಮನಸಿ ಸ್ಥಿತಿರಾತ್ಮನಿ। ಧಾರಣೇತ್ಯುಚ್ಯತೆ ಸಮ್ಯಕ್ ಶಾಸ್ತ್ರ ತಾತ್ಪರ್ಯ ವೇದಿಭಿಃ॥ ಎಂದು ಯೋಗ ಯಾಜ್ಞವಲ್ಕ್ಯರೂ 'ದೇಶ ಬಂಧಶ್ಚಿತ್ತಸ್ಯಧಾರಣಾ' ಎಂದು ಯೋಗ ಸೂತ್ರಕಾರರೂ ವರ್ಣಿಸಿದ್ದಾರೆ. ಧ್ಯಾನವೆಂಬುದು 'ತತ್ರ ಪ್ರತ್ಯಯೈಕತಾ ಧ್ಯಾನಮ್' ಎಂದೂ 'ಧ್ಯಾನಮಾತ್ಮ ಸ್ವರೂಪಸ್ಯ ವೇದನಂ ಮನಸಾ ಖಲು, ಸಗುಣಂ ನಿರ್ಗುಣಂ ತಂಚ' ಎಂದೂ ವಿವರಿಸಲ್ಪಟ್ಟಿದೆ.

ಸಮಾಧಿಯೆಂಬುದು ಜೀವಾತ್ಮನು ಪರಮಾತ್ಮನಲ್ಲಿ ಸ್ಥಿರವಾಗಿ ನಿಲ್ಲುವಿಕೆ. ಇದನ್ನೇ 'ಬ್ರಹ್ಮಣಿ ಪ್ರತ್ಯಗಾತ್ಮನಃ ಅವಸ್ಥಾನಂ ಸಮಾಧಿಃ' ಎಂದು ತಿಳಿಸಿದ್ದಾರೆ.

**ಪದ್ಮಾಭಿರಾಮಮದನೇಕ್ಷಣಪಾಣಿಪಾದಂ**
**ದಿವ್ಯಾಯುಧಾಭರಣಮಾಲ್ಯವಿಲೇಪನಂ ತ್ವಾಮ್ ।**
**ಯೋಗೇನ ನಾಥ ಶುಭಮಾಶ್ರಯಮಾತ್ಮವನ್ತಃ**
**ಸಾಲಮ್ಬನೇನ ಪರಿಚಿನ್ತ್ಯ ನ ಯಾನ್ತಿ ತೃಪ್ತಿಮ್ ॥೨೨॥**

(ನಾಥ) ಎಲೈ ಸ್ವಾಮಿಯೇ, (ಪದ್ಮಾಭಿರಾಮವದನೇಕ್ಷಣ ಪಾಣಿಪಾದಂ) ಪದ್ಮದಂತೆ ಮನೋಹರವಾದ ಮುಖಮಂಡಲವೇನು, ನೇತ್ರಗಳೇನು, ಕೈಗಳೇನು, ಪಾದಗಳೇನು ಇವುಗಳನ್ನುಳ್ಳವನೂ (ದಿವ್ಯಾಯುಧಾ

ಭರಣಮಾಲ್ಯ ವಿಲೇಪನಂ) ಅಪ್ರಾಕೃತವಾದ ಸುದರ್ಶನಾದ್ಯಾಯುಧಗಳೇನು ಕಿರೀಟಮುಕುಟ ಚೂಡಾವತಂಸಾದಿ ಆಭರಣಗಳೇನು, ವೈಜಯಂತೀ ಮುಂತಾದ ಮಾಲೆಗಳೇನು, ಕಸ್ತೂರಿಕಾದಿ ವಿಲೇಪನಗಳೇನು ಇವುಗಳಿಂದ ಲಂಕೃತನೂ (ಶುಭಂ ಆಶ್ರಯಂ) ನಿರತಿಶಯವಾದ ಆನಂದಸ್ವರೂಪದ ಕಾರಣ ಕಲ್ಯಾಣತಮವಾದ ದಿವ್ಯಮಂಗಲವಿಗ್ರಹಯುತನೂ ಆದ (ತ್ವಾಂ) ನಿನ್ನನ್ನು, (ಆತ್ಮವಂತಃ) ಪರಿಶುದ್ಧಮನಸ್ಕರು, (ಸಾಲಂಬನೇನ) ಸಗುಣರೂಪ ವಾದ, (ಯೋಗೇನ) ಧ್ಯಾನದಿಂದ, (ಪರಿಚಿಂತ್ಯ) ಉಪಾಸನೆ ಮಾಡುವವ ರಾಗಿ, (ತೃಪ್ತಿಂ ನಯಾಂತಿ) ಎಷ್ಟು ಭಜಿಸಿದರೂ ತೃಪ್ತಿಯನ್ನು ಹೊಂದುವು ದಿಲ್ಲ.

ಯೋಗಿಗಳು ಧ್ಯಾನಿಸುವ ಬಗೆಯನ್ನು ಸಾಮಾನ್ಯವಾಗಿ ಹೇಳಿದ ನಂತರ ಈ ಶ್ಲೋಕದಲ್ಲಿ ಸಾಲಂಬನಯೋಗ ಸ್ವರೂಪವನ್ನು ವಿವರಿಸುತ್ತಾರೆ. ಭಗವಂತನ ಭುವನಮೋಹಕವಾದ ಮೂರ್ತಿಯನ್ನು ಮನಸ್ಸಿನಲ್ಲಿ ನೆಲೆನಿಲ್ಲಿಸಿ ಆ ನಿರತಿಶಯಾನಂದ ಸ್ವರೂಪನನ್ನು ಅವನ ಸ್ವರೂಪ–ರೂಪ–ಗುಣ ವಿಗ್ರಹ ಗಳೊಡನೆ ಧ್ಯಾನಿಸುವ ಬಗೆಯನ್ನಿಲ್ಲಿ ಹೇಳಿದ್ದಾರೆ ಈ ಧ್ಯಾನದ ಪರಮಾ ನಂದವು ಭಗವಂತನಲ್ಲಿ ಪ್ರಪತ್ತಿ ಮಾಡಿದುದರ ಫಲ.

ಧ್ಯೇಯವಸ್ತುವಿನ ವಿಷಯದಲ್ಲಿ ಯೋಗಯಾಜ್ಞವಲ್ಕ್ಯರು ಹೀಗೆ ತಿಳಿಸುತ್ತಾರೆ.

"ಹೃತ್ಪದ್ಮೇಽಷ್ಟದಲೋಪೇತೇ ಕಂದಮಧ್ಯಾತ್ಸಮುತ್ಥಿತೇ ।
ದ್ವಾದಶಾಂಗುಲಿನಾಲೇಽಸ್ಮಿನ್ ಚತುರಂಗುಲಮನ್ಮುಖೇ ॥
ಪ್ರಾಣಾಯಾಮೈರ್ವಿಕಸಿತೇ ಕೇಸರಾನ್ವಿತ ಕರ್ಣಿಕೇ ।
ವಾಸುದೇವಂ ಜಗನ್ನಾಥಂ ನಾರಾಯಣಮಜಂ ಹರಿಂ ॥
ಚತುರ್ಬಾಹುಮುದಾರಾಂಗಂ ಶಂಖಚಕ್ರಗದಾಧರಂ ।
ಕಿರೀಟಕೇಯೂರಧರಂ ಪದ್ಮಪತ್ರನಿಭೇಕ್ಷಣಂ ॥
ಶ್ರೀವತ್ಸವಕ್ಷಸಂ ವಿಷ್ಣುಂ ಪೂರ್ಣಚಂದ್ರನಿಭಾನನಂ ।
ಶುದ್ಧಸ್ಫಟಿಕಸಂಕಾಶಂ ಪೀತವಾಸಸಮುಚ್ಛ್ರಿತಂ ॥
ಪದ್ಮಪೃಷ್ಠವಿಪದದ್ವಂದ್ವಂ ಪರಮಾತ್ಮಾನಮೀಶ್ವರಂ ।"

ಇಂಥ ದಿವ್ಯಾದ್ಭುತ ಸೌಂದರ್ಯ ಸೌಕುಮಾರ್ಯ ವಿಶಿಷ್ಟನಾದ ಭಗವಂತನನ್ನು ಎಷ್ಟು ಧ್ಯಾನಮಾಡಿದರೂ ತೃಪ್ತಿಯುಂಟಾಗದು.

ಮಾನಾತಿಲಙ್ಘಿಸುಖಬೋಧಮಹಾಮ್ಬುರಾಶೌ
ಮಗ್ನಾಸ್ತ್ರಿಸೀಮರಹಿತೇ ಭವತಃ ಸ್ವರೂಪೇ ।
ತಾಪತ್ರಯೇಣ ವಿಹತಿಂ ನ ಭಜನ್ತಿ ಸನ್ತಃ
ಸಂಸಾರಘರ್ಮಜನಿತೇನ ಸಮಾಧಿಮನ್ತಃ ॥೨೩॥

(ತ್ರಿಸೀಮರಹಿತೇ) ವಸ್ತುತಃ, ದೇಶತಃ ಹಾಗೂ ಕಾಲತಃ ಅಪರಿಚ್ಛಿನ್ನವಾದುದೂ, (ಮಾನಾತಿಲಂಘಿಸುಖಬೋಧ ಮಹಾಂಬುರಾಶೌ) ವಾಕ್ಕು ಮತ್ತು ಮನಸ್ಸುಗಳಿಂದ ಅಳೆಯಲಸಾಧ್ಯವಾದ ಆನಂದ ಮತ್ತು ವಿಜ್ಞಾನಗಳ ಮಹಾಸಮುದ್ರವಾದುದೂ ಆದ, (ಭವತಃ ಸ್ವರೂಪೇ) ಸರ್ವಶ್ರೇಷ್ಠಿಯಾದ ನಿನ್ನ ಸ್ವರೂಪದಲ್ಲಿ, (ಮಗ್ನಾಃ) ಗಾಢವಾಗಿ ಮುಳುಗಿದ, (ಸಮಾಧಿಮಂತಃ ಸಂತಃ) ಪ್ರಶಸ್ತಯೋಗವುಳ್ಳ ಸಜ್ಜನರು, (ಸಂಸಾರಘರ್ಮಜನಿತೇನ) ಸಂಸಾರದ ಬೇಗೆಯಿಂದಾದ, (ತಾಪತ್ರಯೇಣ) ಆಧ್ಯಾತ್ಮಿಕ, ಆದಿಭೌತಿಕ, ಆದಿಲೌಕಿಕಗಳೆಂಬ ಮೂರು ತಾಪಗಳಿಂದಲೂ, (ವಿಹತಿಂ) ಪೀಡೆಯನ್ನು, (ನಭಜಂತಿ) ಅನುಭವಿಸುವುದಿಲ್ಲ.

ಹಿಂದಿನ ಶ್ಲೋಕದಲ್ಲಿ ಭಗವಂತನನ್ನು ಸಾಲಂಬನ ಯೋಗದಿಂದ ಸಾಕ್ಷಾತ್ಕರಿಸುವ ವಿಧಾನವನ್ನು ತಿಳಿಸಿದರು. ಈ ಶ್ಲೋಕದಲ್ಲಿ ಅವನು ನಿರಾಲಂಬನ ಯೋಗಕ್ಕೂ ವಿಷಯನಾಗಿದ್ದಾನೆಂದು ತಿಳಿಸುತ್ತಾರೆ. ಇಲ್ಲಿ ನಿರಾಲಂಬನ ಯೋಗವೆಂದರೆ ಯಾವ ಆಲಂಬನವೂ ಇಲ್ಲದೆ ಲಯಾಭಿಮುಖವಾಗಿರುವುದೆಂದರ್ಥವಲ್ಲ. ಆದಿಮಧ್ಯಾಂತವರ್ಜಿತವಾದುದೂ ಅನಿರ್ವಚನೀಯವಾದುದೂ ವಿಜ್ಞಾನಘನವೂ ಆನಂದಘನವೂ ಆದುದೂ ಆದ ಭಗವತ್ಸ್ವರೂಪದಲ್ಲಿ ಯಾವ ಒಂದು ಅರಿವೂ ಇಲ್ಲದಂತೆ ಮಗ್ನವಾಗುವುದು ನಿರಾಲಂಬನ ಯೋಗ. ರೂಪ ಗುಣ ವಿಗ್ರಹ ವಿಶಿಷ್ಟನಾಗಿ ಧ್ಯಾನಿಸುವುದು ಸಾಲಂಬನವಾದರೆ ಭಗವತ್ಸ್ವರೂಪಚಿಂತನೆ ನಿರಾಲಂಬನ ಯೋಗವಾಗುವುದು. ಇದನ್ನು ಯೋಗಯಾಜ್ಞವಲ್ಕ್ಯರು–

ಏಕಂ ಜ್ಯೋತಿರ್ಮಯಂ ಶುದ್ಧಂ ಸರ್ವಗಂ ವ್ಯೋಮವದ್ಧೃಢಂ ।
ಅತ್ಯಚ್ಛಮಮಲಂ ನಿತ್ಯಂ ಆದಿಮಧ್ಯಾಂತ ವರ್ಜಿತಂ ॥
ಸ್ಥೂಲಸೂಕ್ಷ್ಮಮನಾಕಾಶಂ ಅಸ್ಪೃಶ್ಯಂಚಾಪ್ಯಚಾಕ್ಷುಷಂ ।
ನ ರಸಂ ನ ಚ ಗಂಧಾಢ್ಯಮಪ್ರಮೇಯಮನೌಪಮಂ ॥

ಅನಂದಮಜರಂ ಸತ್ಯಂ ಸದಸತ್ಸರ್ವಕಾರಣಂ ।
ಸರ್ವಾಧಾರಂ ಜಗದ್ರೂಪಂ ಅಮೂರ್ತಿಮಜಮವ್ಯಯಂ॥

ಎಂದು ವರ್ಣಿಸುತ್ತಾ 'ತದೇತಂ ನಿರ್ಗುಣಂ ಜ್ಞಾನಂ' ಎಂದು ವಿವರಿಸಿದ್ದಾರೆ. ನಿರ್ಗುಣ ಜ್ಞಾನವೆಂದರೆ ಯಾವ ಗುಣವಾಗಲಿ ವಿಶೇಷಣವಾಗಲಿ ಇಲ್ಲದೆಂಬ ಭಾವವಲ್ಲ. ಆದರೆ ತನ್ನನ್ನು ಅರಿಯದಂತೆ ಭಗವಂತನ ಸ್ವರೂಪಾನುಸಂಧಾನದಲ್ಲಿ ಮಗ್ನರಾಗುವುದು ನಿರ್ಗುಣಜ್ಞಾನ.

ಕರ್ಮಯೋಗಾದಿಗಳನ್ನು ಮಾಡುವವರಿಗೂ ಆ ಭಗವಂತನೇ ಫಲಪ್ರದನೆಂಬುದನ್ನು ಮುಂದೆ ತಿಳಿಸುತ್ತಾರೆ.

ಧೀಸಂಸ್ಕೃತಾನ್ವಿದಧತಾಮಿಹ ಕರ್ಮಭೇದಾನ್
ಶುದ್ಧಂ ಜಿತೇ ಮನಸಿ ಚಿನ್ತಯತಾಂ ಸ್ವಮೇಕಮ್ ।
ತ್ವತ್ಕರ್ಮಸಕ್ತಮನಸಾಮಪಿ ಚಾಪರೇಷಾಂ
ಸೂತೇ ಫಲಾನ್ಯಭಿಮತಾನಿ ಭವಾನ್ಪ್ರಸನ್ನಃ ॥೨೪॥

(ಇಹ) ವಿಚಿತ್ರಾಧಿಕಾರಿಗಳಿಂದ ಕೂಡಿದ ಈ ಪ್ರಪಂಚದಲ್ಲಿ, (ಧೀಸಂಸ್ಕೃತಾನ್) ಉದ್ಗೀಥಾದ್ಯುಪಾಸನೆಯೇ ಮೊದಲಾದುವುಗಳ ರೂಪದಲ್ಲಿ ಬುದ್ಧಿವಿಶೇಷದಿಂದ ಪರಿಷ್ಕೃತವಾದ, (ಕರ್ಮಭೇದಾನ್) ಯಾಗದಾನಾದಿ ಕರ್ಮಗಳನ್ನು, (ವಿದಧತಾಂ) ಫಲಸಾಧನ ರೂಪದಿಂದ ಅನುಷ್ಠಿಸುವವರಿಗೂ, (ಜಿತೇಮನಸಿ) ವಶ್ಯವಾದ ಮನಸ್ಸಿನಿಂದ, (ಶುದ್ಧಂ) ದೇಹ, ಇಂದ್ರಿಯ ಮನಸ್ಸು, ಪ್ರಾಣ, ಬುದ್ಧಿ ಇವುಗಳಿಂದ ಬೇರೆಯಾಗಿ ಪರಿಶುದ್ಧವಾದ, (ಸ್ವಂಏಕಮ್) ತನ್ನ ಆತ್ಮಸ್ವರೂಪವೊಂದನ್ನೇ, (ಚಿಂತಯತಾಂ) ಧ್ಯಾನಿಸುವವರಿಗೂ, (ಚ) ಮತ್ತು (ತ್ವತ್ಕರ್ಮಸಕ್ತಮನಸಾಂ) ಫಲ–ಸಂಗ–ಕರ್ತೃತ್ವತ್ಯಾಗಪೂರ್ವಕವಾಗಿ ನಿನ್ನ ಆರಾಧನೆಯ ರೂಪವಾದ ಭಕ್ತ್ಯಂಗವಾದ ನಿವೃತ್ತಿ ಕರ್ಮಗಳನ್ನು ಪ್ರೀತಿಯಿಂದ ಮಾಡುವ, (ಅಪರೇಷಾಂಅಪಿ) ಇತರ ಅಧಿಕಾರಿಗಳಿಗೂ ಸಹ, (ಭವಾನ್) ಸರ್ವಶೇಷಿಯಾದ ನೀನು, (ಪ್ರಸನ್ನಃ) ಪ್ರಸನ್ನನಾಗಿ, (ಅಭಿಮತಾನಿ ಫಲಾನಿ) ಆಯಾ ಅಧಿಕಾರಿಗಳಿಗಿಷ್ಟವಾದ ಫಲಗಳನ್ನು, (ಸೂತೇ) ಉಂಟುಮಾಡುತ್ತೀಯೆ.

ಈ ಶ್ಲೋಕದಲ್ಲಿ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ ಇವುಗಳೆಲ್ಲದರಿಂದ ಸರ್ವಾರಾಧ್ಯನಾದ ಪರಮಾತ್ಮನೊಬ್ಬನನ್ನೇ ಆರಾಧಿಸುವರೆಂಬುದನ್ನು ವಿವರಿಸುವರು ಭಗವಂತನನ್ನು ಸಾಕ್ಷಾತ್ಕರಿಸುವ ಮಾರ್ಗಗಳೆರಡು. ಅವು ಭಕ್ತಿ ಮತ್ತು ಪ್ರಪತ್ತಿಗಳು. ಮೋಕ್ಷೋಪಾಯವಾದ ಭಕ್ತಿಗೆ ಭಕ್ತಿಯೋಗ–ಪರಭಕ್ತಿ ಎಂಬ ಹೆಸರೂ ಉಂಟು ಈ ಭಕ್ತಿಯೋಗಕ್ಕೆ ಕರ್ಮಯೋಗ ಮತ್ತು ಜ್ಞಾನಯೋಗಗಳು ಅಂಗಗಳಾಗಿವೆ. ಆತ್ಮಸಾಕ್ಷಾತ್ಕಾರ ಮತ್ತು ಭಗವತ್ಸಾಕ್ಷಾತ್ಕಾರಕ್ಕೆ ಮೊದಲನೆಯ ಹಂತ. ಈ ಆತ್ಮಾನುಭವಕ್ಕೆ ಕರ್ಮಯೋಗ ಜ್ಞಾನಯೋಗಗಳು ಸಾಧನ. ಹೀಗೆ ಕರ್ಮಯೋಗವೇ ಮೊದಲಾದುವನ್ನು ಮಾಡುವವರಿಗೂ ಪ್ರಸನ್ನನಾದ ಭಗವಂತನೇ ಫಲಪ್ರದಾನವನ್ನು ಮಾಡುತ್ತಾನೆ.

**ಉದ್ಬಾಹುಭಾವಮುಪಹಾಯ ಯಥೈವ ಖರ್ವಃ**
**ಪ್ರಾಂಶುಂ ಫಲಾರ್ಥಮಭಿಯಾಚತಿ ಯೋಗಿಚಿನ್ತ್ಯ ।**
**ಏವಂ ಸುದುಷ್ಕರಮುಪಾಯಗಣಂ ವಿಹಾಯ**
**ಸ್ಥಾನೇ ನಿವೇಶಯತಿ ತಸ್ಯ ವಿಚಕ್ಷಣಸ್ತ್ವಾಮ್ ॥೨೫॥**

(ಯೋಗಿಚಿಂತ್ಯ) ಯೋಗಿಗಳಿಂದ ಧ್ಯಾನಿಸಲ್ಪಡುವವನೇ, (ಯಥಾ) ಹೇಗೆ, (ಖರ್ವಃ) ಕುಳ್ಳನಾದವನು, (ಫಲಾರ್ಥಂ) ತನಗೆ ನಿಲುಕದ ಹಣ್ಣಿಗಾಗಿ (ಉದ್ಬಾಹುಭಾವಂ) ಮೇಲಕ್ಕೆ ತೋಳುಗಳನ್ನೆತ್ತಿ ನೀಡುವ ರೀತಿಯನ್ನು, (ಅಪಹಾಯ) ಬಿಟ್ಟವನಾಗಿ, (ಪ್ರಾಂಶುಂ) ಉನ್ನತನಾದವನನ್ನು (ಅಭಿಯಾಚತಿ) ಬೇಡುತ್ತಾನೆಯೊ, (ಏವಂ) ಹಾಗೆಯೇ, (ವಿಚಕ್ಷಣಃ) ತತ್ತ್ವನಿರ್ಣಯವನ್ನು ಹೊಂದಿದ ಬುದ್ಧಿವಂತನು, (ಸುದುಷ್ಕರಂ) ಬಹಳ ಕಠಿಣಗಳಾದ, (ಉಪಾಯಗಣಂ) ಕರ್ಮಜ್ಞಾನಾದ್ಯುಪಾಯ ಸಮೂಹಗಳನ್ನು, (ವಿಹಾಯ) [ದುಷ್ಕರವಾದುದರಿಂದಲೇ] ಪರಿತ್ಯಜಿಸಿ, (ತಸ್ಯಸ್ಥಾನೆ) ಅದರ ಸ್ಥಾನದಲ್ಲಿ, (ತ್ವಾಂ) ಸರ್ವಜ್ಞನೂ ಸರ್ವಶಕ್ತನೂ ಆದ ನಿನ್ನನ್ನು, (ನಿವೇಶಯತಿ) ಇಟ್ಟುಕೊಳ್ಳುತ್ತಾನೆ.

ಈ ಶ್ಲೋಕದಲ್ಲಿ ಭಗವಂತನಲ್ಲಿ ಪ್ರಪತ್ತಿ ಮಾಡುವುದಾವಶ್ಯಕವೆಂಬು

ದನ್ನು ತಿಳಿಸುತ್ತಾರೆ. ಅಶಕ್ತನಾದವನು ತನಗೆ ಬೇಕಾದ ಫಲಪ್ರಾಪ್ತಿಗೆ ಶಕ್ತನೊಬ್ಬನನ್ನು ಬೇಡುವುದು ಸರ್ವವಿದಿತವಾಗಿದೆ. ತಮ್ಮಿಂದಾಗಲಿ ಮತ್ತೊಬ್ಬರಿಂದಾಗಲಿ ಸಾಧಿಸಲು ಸಾಧ್ಯವಾಗದೇ ಹೋದಾಗ ಆ ಇಷ್ಟಾರ್ಥಪ್ರಾಪ್ತಿಗಾಗಿ ಸಮರ್ಥನೂ ಸರ್ವಜ್ಞನೂ ಸಹಜಸುಹೃತ್ತಾದವನೂ ಆದವನನ್ನು ಮರೆಹೊಗುವುದು ಶರಣಾಗತಿ. ಮೇಲೆ ಕೊಟ್ಟಿರುವ ಉಪಮಾನದಿಂದಲೇ ಇದು ಅಶಕ್ತಾಧಿಕಾರವೆಂಬುದು ಗೊತ್ತಾಗುವುದು. ಪ್ರಪತ್ತಿಯನ್ನು ತನ್ನಂತೆಯೇ ಅಶಕ್ತನಾದವನಲ್ಲಿ ಮಾಡದೆ ಶಕ್ತನಾದವನಲ್ಲಿ ಮಾಡಬೇಕೆಂಬುದೂ ಸ್ಪಷ್ಟವಾಗಿ ಸೂಚಿತವಾಗಿದೆ

ನಿತ್ಯಾಲಸಾರ್ಹಮಭಯಂ ನಿರಪೇಕ್ಷಮನ್ಯೈ-
ರ್ವಿಶ್ವಾಧಿಕಾರಮಖಿಲಾಭಿಮತಪ್ರಸೂತಿಂ ।
ಶಿಕ್ಷಾವಿಶೇಷಸುಭಗಂ ವ್ಯವಸಾಯಸಿದ್ಧಾಃ
ಸತ್ಕುರ್ವತೇ ತ್ವಯಿ ಮುಕುಂದ ಷಡಂಗಯೋಗಂ ॥೨೬॥

(ಮುಕುಂದ) ಎಲೈ ಮುಕುಂದನೇ, (ನಿತ್ಯಾಲಸಾರ್ಹಂ) ಕರ್ಮಜ್ಞಾನ ಭಕ್ತಿಯೋಗಗಳನ್ನು ಮಾಡಲು ಶಕ್ತಿಯಿಲ್ಲದವರಿಗೆ ಸಾಧ್ಯವಾದುದೂ, (ಅಭಯಂ) ಯಾವ ಬಗೆಯ ಅಪಾಯವಿಲ್ಲದುದೂ, (ಅನ್ಯೈಃನಿರಪೇಕ್ಷಂ) ಬೇರೆ ಸಾಧನಾಂತರದ ಅಪೇಕ್ಷೆ ಇಲ್ಲದುದೂ, (ವಿಶ್ವಾಧಿಕಾರಂ) ಜಾತಿ ಕುಲ ಲಿಂಗ ಗುಣ ಭೇದಗಳಿಲ್ಲದೆ ಎಲ್ಲರಿಗೂ ಅನುಷ್ಠಿಸಲಧಿಕಾರವಿರುವುದೂ, (ಅಖಿಲಾಭಿಮತಪ್ರಸೂತಿಂ) ಎಲ್ಲ ಬಗೆಯ ಇಷ್ಟಾರ್ಥಗಳನ್ನೂ ನೆರವೇರಿಸಿ ಕೊಡುವುದೂ, (ಶಿಕ್ಷಾವಿಶೇಷಸುಭಗಂ) ಆಚಾರ್ಯೋಪದೇಶದಿಂದ ಸುಲಭವಾಗಿ ಲಭ್ಯವಾಗತಕ್ಕದೂ ಆದ, (ಷಡಂಗಯೋಗವ್) ಆರು ಅಂಗಗಳಿಂದ ಕೂಡಿದ ಪ್ರಪತ್ತಿಯನ್ನು, (ತ್ವಯಿ) ಸರ್ವಜ್ಞನೂ ಸರ್ವಶಕ್ತನೂ ಆದ ನಿನ್ನಲ್ಲಿ ಮಾಡಬೇಕೆಂದು, (ವ್ಯವಸಾಯಸಿದ್ಧಾಃ) ನಿಶ್ಚಯಶಾಲಿಗಳೂ ಅಭ್ಯಾಸ ಸಿದ್ಧರೂ ಆದ ಹಿರಿಯರು, (ಸತ್ಕುರ್ವತೇ) ಮಾನ್ಯಮಾಡುತ್ತಾರೆ.

ಈ ಶ್ಲೋಕದಲ್ಲಿ ಪ್ರಪತ್ತಿಯ ಸ್ವರೂಪವನ್ನು ಆಚಾರ್ಯರು ನಿರೂಪಿಸಿದ್ದಾರೆ. ಶರಣಾಗತಿಯು ಅಶಕ್ತರಿಗೆ ತಕ್ಕುದೂ ಅಪಾಯರಹಿತವಾದುದೂ

ಆಗಿದೆ ಲೋಕದ ಎಲ್ಲ ಚೇತನರಿಗೂ ಅನ್ವಯಿಸುತ್ತದೆ. ಎಲ್ಲ ಅಪೇಕ್ಷೆಗಳನ್ನೂ ದೊರಕಿಸಿಕೊಡುತ್ತದೆ. ಆಚಾರ್ಯರ ಉಪದೇಶದಿಂದ ಸುಲಭವಾಗಿ ಲಭಿಸುತ್ತದೆ. ನಿಶ್ಚಯಶಾಲಿಗಳಾದ ಹಿರಿಯರಿಂದ ಇದು ಮಾನ್ಯ ಮಾಡಲ್ಪಟ್ಟಿದೆ. ಇಂಥ ಪ್ರಭಾವವುಳ್ಳ ಉಪಾಯವಿರುವಾಗ ನಾವು ಅನುಷ್ಠಿಸಿ ಸಫಲರಾಗಬೇಕು.

**ತ್ವತ್ಪ್ರಾತಿಕೂಲ್ಯವಿಮುಖಾಃ ಸ್ಫುರದಾನುಕೂಲ್ಯಾಃ**
**ಕೃತ್ವಾ ಪುನಃ ಕೃಪಣತಾಂ ವಿಗತಾತಿಶಂಕಾಃ ।**
**ಸ್ವಾಮಿನ್ಭವ ಸ್ವಯಮುಪಾಯ ಇತೀರಯಂತ-**
**ಸ್ತ್ವಯ್ಯರ್ಪಯಂತಿ ನಿಜಭಾರಮಪಾರಶಕ್ತೌ ॥೨೭॥**

(ಸ್ಫುರದಾನುಕೂಲ್ಯಾಃ) ನಿನ್ನಲ್ಲಿ ಸ್ಫುಟತರವಾದ ಆನುಕೂಲ್ಯವನ್ನು ಮಾಡುವವರಾಗಿ, (ತ್ವತ್ಪ್ರಾತಿಕೂಲ್ಯವಿಮುಖಾಃ) ನಿನಗೆ ಪ್ರತಿಕೂಲವಾದುದನ್ನು ಬಿಟ್ಟವರಾಗಿ, (ಪುನಃ ಕೃಪಣತಾಂ ಕೃತ್ವಾ) ಹಾಗೆಯೆ ತಮ್ಮ ಕಾರ್ಪಣ್ಯವನ್ನು ಮುಂದೆ ಮಾಡಿದವರಾಗಿ, (ವಿಗತಾತಿಶಂಕಾಃ) ಸಂದೇಹವೇ ಇಲ್ಲದಂತೆ ಮಹಾವಿಶ್ವಾಸವನ್ನು ಹೊಂದಿದವರಾಗಿ, (ಸ್ವಾಮಿನ್ ಸ್ವಯಂ ಉಪಾಯೋ ಭವ) 'ಪ್ರಭುವೇ ನೀನೇ ನನಗೆ ಉಪಾಯನಾಗು', (ಇತೀರಯಂತಃ) ಎಂದು ನುಡಿಯುವವರಾಗಿ, (ಅಪಾರ ಶಕ್ತೌ ತ್ವಯಿ) ಎಲ್ಲೆಯಿಲ್ಲದ ಶಕ್ತಿಯುಳ್ಳ ಸಮರ್ಥನಾದ ನಿನ್ನಲ್ಲಿ, (ನಿಜಭಾರಂ) ತಮ್ಮ ರಕ್ಷಣೆಯ ಭಾರವನ್ನು, (ಅರ್ಪಯಂತಿ) ಒಪ್ಪಿಸುತ್ತಾರೆ.

ಈ ಶ್ಲೋಕದಲ್ಲಿ ಪ್ರಪತ್ತಿಯ ಪರಿಕರಗಳನ್ನು ನಿರೂಪಿಸಿದೆ. ಆನುಕೂಲ್ಯ ಸಂಕಲ್ಪ, ಪ್ರಾತಿಕೂಲ್ಯವರ್ಜನ, ಮಹಾವಿಶ್ವಾಸ, ಕಾರ್ಪಣ್ಯ, ಗೋಪ್ತೃತ್ವವರಣ ಎಂಬ ಈ ಐದು ಅಂಗಗಳಿಂದ ಕೂಡಿದವರಾಗಿ ಭಗವಂತನಲ್ಲಿ ಆತ್ಮಾರ್ಪಣೆಯನ್ನು ಮಾಡಬೇಕು. ಶ್ರೀಮದ್ರಾಮಾಯಣದಲ್ಲಿ ತ್ರಿಜಟೆಯ ವೃತ್ತಾಂತದಲ್ಲಿಯೂ ವಿಭೀಷಣ ಶರಣಾಗತಿಯ ಪ್ರಕರಣದಲ್ಲಿಯೂ ಇವುಗಳನ್ನು ಕಾಣಬಹುದು.

ಅರ್ಥಾನ್ತರೇಷು ವಿಮುಖಾನಧಿಕಾರಹಾನೇಃ
ಶ್ರದ್ಧಾಧನಾಂಸ್ತ್ವದನುಭೂತಿವಿಲಮ್ಬಭೀತಾನ್ ।
ದೀಪಪ್ರಕಾಶ ಲಭಸೇ ಸುಚಿರಾತ್ಕೃತೀವ
ನ್ಯಸ್ತಾತ್ಮನಸ್ತವ ಪದೇ ನಿಭೃತಾನ್ಪ್ರಪನ್ನಾನ್ ॥೨೮॥

(ದೀಪಪ್ರಕಾಶ) ಎಲೈ ದೀಪಪ್ರಕಾಶನೇ, (ಅಧಿಕಾರಹಾನೇಃ) ಲೌಕಿಕ ಪ್ರಾಪ್ತಿಗಳಲ್ಲಿ ಅಧಿಕಾರವು ಮುಮುಕ್ಷುಗಳಿಗೆ ತಪ್ಪಿಹೋಗುವ ಕಾರಣ, (ಅರ್ಥಾಂತರೇಷು) ಇತರ ಪ್ರಯೋಜನಗಳಲ್ಲಿ, (ವಿಮುಖಾನ್) ಅಭಿಲಾಷೆ ಇಲ್ಲದವರೂ, (ಶ್ರದ್ಧಾಧನಾನ್) ಮಹಾ ವಿಶ್ವಾಸವೆಂಬ ಐಶ್ವರ್ಯವನ್ನುಳ್ಳ ವರೂ, (ತ್ವದನುಭೂತಿವಿಲಂಬಭೀತಾನ್) ಸರ್ವಸ್ವಾಮಿಯೂ ಸರ್ವ ಶೇಷಿಯೂ ಆದ ನಿನ್ನ ಅನುಭವಕ್ಕೊದಗಬಹುದಾದ ವಿಳಂಬಕ್ಕೆ ಹೆದರು ವವರೂ, (ತವಪದೇ) ನಿನ್ನ ಪಾದಪದ್ಮಗಳಲ್ಲಿ (ನ್ಯಸ್ತಾತ್ಮನಃ) ಆತ್ಮಾರ್ಪಣೆ ಯನ್ನು ಮಾಡಿರುವವರೂ, (ನಿಭೃತಾನ್) ತಾವು ಅನುಷ್ಠಿಸಿದ ಉಪಾಯದಲ್ಲಿ ದೃಢವಿಶ್ವಾಸವುಳ್ಳವರೂ ಆದ, (ಪ್ರಪನ್ನಾನ್) ಪ್ರಪನ್ನರನ್ನು, (ಸುಚಿರಾತ್) ಬಹಳ ಕಾಲಕ್ಕೆ, (ಕೃತೀವ) ಕೃತಕೃತ್ಯನಾದವನಂತೆ, (ಲಭಸೇ) ಪಡೆಯು ತ್ತೀಯೆ.

ಹಿಂದಿನ ಶ್ಲೋಕದಲ್ಲಿ ಪ್ರಪತ್ತಿಯ ಸ್ವರೂಪ, ಪ್ರಯೋಗಪ್ರಕಾರ ಪರಿಕರ, ಅಧಿಕಾರಿಗಳು ಮುಂತಾದುವನ್ನು ನಿರೂಪಿಸಿದರು. ಈ ಶ್ಲೋಕದಲ್ಲಿ ಮೋಕ್ಷಕ್ಕಾಗಿ ಅನುಷ್ಠಿಸುವ ಪೂರ್ಣಪ್ರಪತ್ತಿಯ ದೌರ್ಲಭ್ಯವನ್ನು ಹೇಳುತ್ತಾರೆ —

'ಬಹೂನಾಂ ಜನ್ಮನಾಂ ಅಂತೇ ಜ್ಞಾನವಾನ್ ಮಾಂ ಪ್ರಪದ್ಯತೇ' ಎಂದೂ, 'ಅನೇಕಜನ್ಮಸಂಸಿದ್ಧಃ ತತೋ ಯಾಂತಿ ಪರಾಂಗತಿಂ' ಎಂದೂ ಹೇಳಿದಂತೆ ಇಂಥ ಪ್ರಪನ್ನರು ದುರ್ಲಭರು.

ಭಗವಂತನನ್ನು ಕೃತಕೃತ್ಯರಿಗೆ ಹೋಲಿಸಿದೆ. ಶರಣ್ಯನಿಗೆ ಶರಣಾಗತಿ ಲಾಭದಿಂದ ಕೃತಕೃತ್ಯತೆ. ಭಗವಂತನಿಗೆ ಪ್ರಪನ್ನಲಾಭ ಅಪೂರ್ವವಾದ ಲಾಭದಂತೆ ಎಂದು ವರ್ಣಿಸಿದೆ. ಹೀಗೆ ಈ ಶ್ಲೋಕದಲ್ಲಿ ಪ್ರಪನ್ನರ ಮಹತ್ವವನ್ನು ಹೇಳಿದೆ.

ಮನ್ತ್ರೈರನುಶ್ರವಮುಖೇಷ್ವಧಿಗಮ್ಯಮಾನೈಃ
ಸ್ವಾಧಿಕ್ರಿಯಾಸಮುಚಿತೈರ್ಯದಿ ವಾಽನ್ಯವಾಕ್ಯೈಃ ।
ನಾಥ ತ್ವದೀಯಚರಣೌ ಶರಣಂ ಗತಾನಾಂ
ನೈವಾಯುತಾಯುತಕಲಾಽಪ್ಯಪರೈರವಾಪ್ಯಾ ॥೨೯॥

(ನಾಥ) ಎಲೈ ಪ್ರಭುವೇ, (ಅನುಶ್ರವಮುಖೇಷು) ವೇದವೇ ಮೊದಲಾದುವುಗಳಲ್ಲಿ, ( ಅಧಿಗಮ್ಯಮಾನೈಃ ) ಸಂಪ್ರದಾಯಪರಂಪರೆಯಿಂದ ಪಡೆಯಲ್ಪಟ್ಟಿರುವ, (ಸ್ವಾಧಿಕ್ರಿಯಾ ಸಮುಚಿತೈಃ) ತಮ್ಮ ತಮ್ಮ ಅಧಿಕಾರಕ್ಕನುಗುಣವಾದ (ಮಂತ್ರೈಃ) ಮಂತ್ರಗಳಿಂದಲಾಗಲಿ, (ಯದಿವಾ) ಅಥವಾ, (ಅನ್ಯವಾಕ್ಯೈಃ) ಪರಕಾಲ ಪರಾಂಕುಶಾದಿಗಳ ವಾಕ್ಯಗಳಿಂದಾಗಲಿ, (ತ್ವದೀಯಚರಣೌ) ನಿನ್ನ ಪದದ್ವಯದಲ್ಲಿ, (ಶರಣಂ ಗತಾನಾಂ) ಶರಣಾಗತಿ ಮಾಡಿದವರ ಮಹಿಮೆಯ, (ಅಯುತಾಯುತಕಲಾಪಿ) ಹತ್ತುಸಹಸ್ರ ಭಾಗದಲ್ಲಿನ ಒಂದು ಅಂಶದ ಹತ್ತುಸಹಸ್ರಭಾಗದಷ್ಟಾದರೂ, (ಅಪರೈಃ) ಇತರ ಉಪಾಯಗಳನ್ನನುಷ್ಠಿಸುವವರಿಂದ, (ನ ಅವಾಪ್ಯ) ಪಡೆಯಲು ಸಾಧ್ಯವಾಗುವುದಿಲ್ಲ.

ಇತರ ಅಧಿಕಾರಿಗಳಿಗಿಂತ ಪ್ರಪನ್ನಾಧಿಕಾರಿಗಳು ಶ್ರೇಷ್ಠರೆಂಬುದನ್ನು ಈ ಶ್ಲೋಕದಲ್ಲಿ ಹೇಳಿದ್ದಾರೆ.

ವೈದಿಕವಾದ ವಾಕ್ಯಗಳಿಂದಾಗಲಿ, ತಾಂತ್ರಿಕವಾದ ವಾಕ್ಯಗಳಿಂದಾಗಲಿ ಭಗವಂತನಲ್ಲಿ ಶರಣಾಗತಿ ಮಾಡಬಹುದೆಂದು ಹೇಳಿದೆ.

ದತ್ತಾಃ ಪ್ರಜಾ ಜನಕವತ್ತವ ದೇಶಿಕೇನ್ದ್ರೈಃ
ಪತ್ಯಾಽಭಿನನ್ದ್ಯ ಭವತಾ ಪರಿಣೀಯಮಾನಾಃ ।
ಮಧ್ಯೇ ಸತಾಂ ಮಹಿತಭೋಗವಿಶೇಷಸಿದ್ಧ್ಯೈ
ಮಾಙ್ಗಲ್ಯಸೂತ್ರಮಿವ ಬಿಭ್ರತಿ ಕಿಂಕರತ್ವಮ್ ॥೩೦॥

(ಜನಕವತ್) ಜನಕರಾಜನಿಂದ ಹೇಗೋ ಹಾಗೆ, (ದೇಶಿಕೇಂದ್ರೈಃ) ಆಚಾರ್ಯವರ್ಯರುಗಳಿಂದ, (ತವದತ್ತಾಃ) ಕಾಪಾಡಲು ಸಮರ್ಥನಾದ ನಿನಗೆ ಸಮರ್ಪಿಸಲ್ಪಟ್ಟವರೂ ಹಾಗೆಯೇ, (ಭವತಾ ಪತ್ಯಾ) ಪತಿಯೂ

ಶೇಷಿಯೂ ಆದ ನಿನ್ನಿಂದ, (ಪರಿಣೀಯಮಾನಾಃ) ಪರಿಗ್ರಹಿಸಲ್ಪಟ್ಟವರೂ ಆದ, (ಪ್ರಜಾಃ) ಚೇತನರು, (ಮಹಿತಭೋಗವಿಶೇಷಸಿದ್ಧ್ಯೈ) ನಿನ್ನ ಗುಣಾನುಭವಕೈಂಕರ್ಯರೂಪವಾದ ಅತ್ಯಧಿಕವಾದ ಆನಂದಾನುಭವಕ್ಕಾಗಿ, (ಸತಾಂ ಮಧ್ಯೆ) ಪ್ರಪನ್ನಜನರ ಮಧ್ಯದಲ್ಲಿ, (ಕಿಂಕರತ್ವಂ) ದಾಸ್ಯವನ್ನು, (ಮಾಂಗಲ್ಯಸೂತ್ರಮಿವ) ಮಾಂಗಲ್ಯಸೂತ್ರದೋಪಾದಿಯಲ್ಲಿ, (ಬಿಭ್ರತಿ) ಧರಿಸುತ್ತಾರೆ.

ಈ ಶ್ಲೋಕದಿಂದ ಆರಂಭಿಸಿ ಪ್ರಪನ್ನರ ಉತ್ತರ ಕೃತ್ಯವನ್ನು ವಿವರಿಸುತ್ತಾರೆ. ಅದರಲ್ಲಿಯೂ ವಿಶೇಷತಃ ಅವರ ಸ್ವರೂಪನಿಷ್ಠೆಯನ್ನು ಇಲ್ಲಿ ಹೇಳಿದೆ. ಈ ಶ್ಲೋಕದಲ್ಲಿ ಪ್ರಪತ್ತಿಯನ್ನು ಭಗವಂತನಿಗೂ ಜೀವನಿಗೂ ಆಗುವ ಪರಿಣಯವೆಂದು ರೂಪಿಸಿದ್ದಾರೆ. ಆಚಾರ್ಯರು ಭರನ್ಯಾಸದ ರೂಪದಲ್ಲಿ ಕನ್ಯಕಾದಾನ ಮಾಡುತ್ತಾರೆ. ಭಗವಂತನು ಭರಸ್ವೀಕಾರ ರೂಪದಲ್ಲಿ ಪಾಣಿಗ್ರಹಣ ಮಾಡುತ್ತಾನೆ. ಆತ್ಮನ ವರಾನ್ವೇಷಣೆ ಇಲ್ಲಿಗೆ ಮುಗಿಯುತ್ತದೆ. ಇಲ್ಲಿಂದ ಮುಂದೆ ಪ್ರಪನ್ನನು ಭಗವಂತನ ಪ್ರಿಯಕಾಮೆಯಾಗುತ್ತಾನೆ. 'ಸ್ತ್ರೀಪ್ರಾಯಮಿತರಸ್ಸರ್ವಂ' ಎಂಬಂತೆ ಲೋಕದಲ್ಲಿನ ಆತ್ಮಗಳೆಲ್ಲ ಸ್ತ್ರೀಪುರುಷ ಭೇದವಿಲ್ಲದೆ ಭಗವಂತನಿಗೆ ವಧುಗಳಾಗಿದ್ದಾರೆ. ಭಗವಂತನಿಗೆ ವಧುವಾಗುವ ಆತ್ಮನು ಭಗವಂತನಿಗೇ ಸೇರಿದವನಾಗಿ ಮನಸಾ ವಾಚಾ ಕರ್ಮಣಾ ಆ ಮಹಾತ್ಮನಿಗೆ ಒಪ್ಪಾಗುವಂತೆ ಪತಿವ್ರತೆಯ ಜೀವನವನ್ನು ನಡೆಸುತ್ತಾನೆ. ಹೀಗೆ ಈ ಆತ್ಮಪರಿಣಯ ಶುಭೋದರ್ಕವೂ ಪುಣ್ಯಪ್ರದವೂ ಆಗಿದೆ

**ದಿವ್ಯೇ ಪದೇ ನಿಯತಕಿಂಕರತಾಧಿರಾಜ್ಯಂ**
**ದಾತುಂ ತ್ವದೀಯದಯಯಾ ವಿಹಿತಾಭಿಷೇಕಾಃ ।**
**ಆದೇಹಪಾತಮನಘಾಃ ಪರಿಚರ್ಯಯಾ ತೇ**
**ಯುಞ್ಜಾನಚಿನ್ತ್ಯ ಯುವರಾಜಪದಂ ಭಜನ್ತಿ** ॥೩೦॥

(ಯುಂಜಾನ ಚಿಂತ್ಯ) ಎಲೈ ಯೋಗಿಗಳಿಂದ ಧ್ಯಾನಿಸಲ್ಪಡತಕ್ಕ ಸ್ವಾಮಿಯೇ, (ದಿವ್ಯಪದೇ) ಪರಮಪದದಲ್ಲಿ, (ನಿಯತಕಿಂಕರತಾಧಿ ರಾಜ್ಯಂ)

ನಿಶ್ಚಿತವಾಗಿರುವ ಕೈಂಕರ್ಯ ಸಾಮ್ರಾಜ್ಯವನ್ನು, (ದಾತುಂ) ಕೊಡುವುದಕ್ಕಾಗಿ, (ತ್ವದೀಯದಯಯಾ) ನಿನ್ನ ಪರಿಪೂರ್ಣವಾದ ಕೃಪೆಯಿಂದ, (ವಿಹಿತಾಭಿಷೇಕಾಃ) ಅಭಿಷೇಕ ಮಾಡಲ್ಪಟ್ಟವರು, (ಆದೇಹಪಾತಂ) ಶರೀರವು ಬಿದ್ದು ಹೋಗುವವರೆಗೂ, (ಅನಘಾಃ) ಪಾಪರಹಿತರಾಗಿ, (ತೇ) ನಿನ್ನ, (ಪರಿಚರ್ಯಯಾ) ಆಜ್ಞಾನುಜ್ಞಾ ರೂಪವಾದ ಕೈಂಕರ್ಯದಿಂದ, (ಯುವರಾಜಪದಂ) ಯುವರಾಜಪದವಿಯನ್ನು, (ಭಜಂತಿ) ಅನುಭವಿಸುತ್ತಾರೆ.

ಹಿಂದಿನ ಶ್ಲೋಕದಲ್ಲಿ ಹೇಳಿದ ಮಹಿತಭೋಗವನ್ನಿಲ್ಲಿ ವರ್ಣಿಸಿದೆ. 'ಸಃ ಸ್ವರಾಡ್ಭವತಿ,' 'ಸೋಽಕ್ಷರಃ ಪರಮಃ ಸ್ವರಾಟ್' ಎಂಬಂತೆ ಮುಕ್ತನು ಅಪಹತಪಾಪ್ಮತ್ವಾದಿ ಅಷ್ಟಗುಣಾವಿರ್ಭಾವಪೂರ್ವಕವಾಗಿ ಭಗವದನುಭವದ ಮಹಾನಂದವನ್ನು ಪಡೆದುಕೊಳ್ಳುತ್ತಾನೆ. ಭಗವಂತನ ನಿತ್ಯಕೈಂಕರ್ಯವೆಂಬ ಈ ಮುಕ್ತಿಸಾಮ್ರಾಜ್ಯದಲ್ಲಿ ಭಗವದ್ದಯೆಯಿಂದ ಇವನು ಪಟ್ಟಾಭಿಷಿಕ್ತನಾಗುತ್ತಾನೆ. ಇಲ್ಲಿ ಅಭಿಷೇಕವೆಂಬುದು ಸದಾಚಾರ್ಯೋಪದೇಶಪೂರ್ವಕವಾದ ಭಗವತ್ಸಮಾಶ್ರಯಣವನ್ನು ಸೂಚಿಸುತ್ತದೆ. ಪ್ರಪನ್ನನು ಪ್ರಪತ್ತಿಮಾಡದನಂತರ ಶಾಸ್ತ್ರ ಮರ್ಯಾದೆಯನ್ನು ಮೀರದೆ ಪಾಪದೂರವಾದ ಜೀವನವನ್ನು ನಡೆಸಬೇಕು. ಇವನು ಅನುಷ್ಠಿಸಿದ ಪ್ರಪತ್ತಿಯಿಂದ ಅಭ್ಯುಪಗತವಾದ ಪ್ರಾರಬ್ಧಕರ್ಮವನ್ನು ಬಿಟ್ಟರೆ ಉಳಿದ ಪೂರ್ವಕರ್ಮಗಳೆಲ್ಲ ನಾಶಹೊಂದುವುವು. ಮುಂದೆ ಪ್ರಾಮಾದಿಕವಾದ ಉತ್ತರಾಘವು ಲೇಪಿಸದು. ಹೀಗಾಗಿ ಅವನು 'ಅನಘ'ನಾಗುತ್ತಾನೆ. ಇಂಥ ಧನ್ಯನು ಭಗವತ್ಕೈಂಕರ್ಯಾದಿಗಳನ್ನು ಮಾಡುತ್ತಾ ಇಲ್ಲಿರುವಷ್ಟು ಕಾಲವನ್ನು ನೂಕುತ್ತಾನೆ.

ತ್ವಾಂ ಪಾಞ್ಚರಾತ್ರಿಕನಯೇನ ಪೃಥಗ್ವಿಧೇನ
ವೈಖಾನಸೇನ ಚ ಪಥಾ ನಿಯತಾಧಿಕಾರಾಃ ।
ಸಂಜ್ಞಾವಿಶೇಷನಿಯಮೇನ ಸಮರ್ಚಯನ್ತಃ
ಪ್ರೀತ್ಯಾ ನಯನ್ತಿ ಫಲವನ್ತಿ ದಿನಾನಿ ಧನ್ಯಾಃ ॥೩೨॥

(ತ್ವಾಂ) ಸರ್ವಜನರಿಂದಲೂ ಅರ್ಚಿಸಲ್ಪಡಬೇಕಾದ ನಿನ್ನನ್ನು, (ಪೃಥಗ್ವಿಧೇನ) ತಂತ್ರ, ಆಗಮ, ತಂತ್ರಸಿದ್ಧಾಂತ, ತಂತ್ರಾಂತರಗಳೆಂಬ ರೀತಿಯಲ್ಲಿ ಅನೇಕ ಬಗೆಯಾಗಿರುವ, (ಪಾಂಚರಾತ್ರಿಕನಯೇನ) ಪಾಂಚ ರಾತ್ರಾಗಮದ ಮಾರ್ಗದಿಂದಲೂ ಹಾಗೆಯೇ (ವೈಖಾನಸೇನಚ ಪಥಾ) ಅತ್ರಿಮರೀಚಿ ಭೃಗ್ವಾದಿಪ್ರೋಕ್ತವಾದ ವೈಖಾನಸಾಗಮದ ರೀತಿಯಿಂದಲೂ, (ನಿಯತಾಧಿಕಾರಾಃ) ನಿಷ್ಕೃಷ್ಟವಾದ ಅಧಿಕಾರವುಳ್ಳ, (ಧನ್ಯಾಃ) ಭಾಗ್ಯ ಶಾಲಿಗಳಾದವರು, (ಸಂಜ್ಞಾವಿಶೇಷನಿಯಮೇನ) ಬೇರೆಬೇರೆಯಾದ ದಿವ್ಯ ನಾಮಧೇಯಗಳ ಅನುಸಂಧಾನದೊಡನೆ, (ಪ್ರೀತ್ಯಾಸಮರ್ಚಯತಃ) ಬಹಳ ಪ್ರೀತಿಯಿಂದ ಸೇವಿಸುವವರಾಗಿ, (ದಿನಾನಿ) ದಿವಸಗಳನ್ನು, (ಫಲವಂತಿ ನಯಂತಿ) ಸಫಲವಾದವುಗಳನ್ನಾಗಿ ಮಾಡಿಕೊಂಡು ಕಳೆಯುತ್ತಾರೆ.

ಈ ಶ್ಲೋಕದಲ್ಲಿ ಹಿಂದೆ ಪ್ರಸ್ತುತವಾದ ಪರಿಚರಣದ ಪ್ರಕಾರವನ್ನು ನಿರೂಪಿಸುತ್ತಾರೆ. ಆಗಮಗಳು ಮುಖ್ಯವಾಗಿ ಪಾಂಚರಾತ್ರ ಮತ್ತು ವೈಖಾನಸ ಎಂದು ಎರಡು ಬಗೆ ವೇದಕ್ಕೆ ಎಲ್ಲಿಯೂ ವಿರುದ್ಧವಿಲ್ಲದ ಕಾರಣ ಈ ಪಾಂಚರಾತ್ರಾಗಮವು ಪೂರ್ಣವಾಗಿ ಪ್ರಮಾಣವೆಂದು ಸ್ಥಾಪಿಸಲಾ ಗಿದೆ. ಇವೂ ಅನೇಕ ಪ್ರಕಾರಗಳಾಗಿವೆ. ಇವುಗಳನ್ನು ಸಂಪ್ರದಾಯಕ್ಕನು ಸಾರವಾಗಿ ಅನುಸರಿಸಬೇಕೆಂದೂ ತಂತ್ರಾಂತರ ಸಂಬಂಧವುಂಟಾಗಬಾರ ದೆಂದೂ 'ನಿಯತಾಧಿಕಾರಾಃ' ಎಂಬುದರಿಂದ ಸೂಚಿಸಿದ್ದಾರೆ. 'ಸಂಜ್ಞಾ ವಿಶೇಷನಿಯಮೇನ' ಎಂಬುದರಿಂದ ಒಂದೊಂದು ಸಂಪ್ರದಾಯದವರೂ ವಿಶೇಷವಾದ ಸಂಜ್ಞೆಗಳನ್ನು ಅನುಸಂಧಾನ ಮಾಡುವರೆಂದು ಸೂಚಿಸಿದ್ದಾರೆ. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂದು ಪಾಂಚರಾತ್ರಾ ಗಮದವರೂ ವಿಷ್ಣು, ಪುರುಷ, ಸತ್ಯ, ಅಚ್ಯುತ ಎಂದು ವೈಖಾನಸಾಗಮ ದವರೂ ಬೇರೆಬೇರೆಯಾದ ದಿವ್ಯ ನಾಮಧೇಯಗಳನ್ನು ಅನುಸಂಧಾನ ಮಾಡುವರು. ಇದರಿಂದ ಇವೆರಡೂ ಮಾನ್ಯವಾದುವೆಂದೂ ಒಂದರೊಡ ನೊಂದು ಸಂಕೀರ್ಣವಾಗದಂತೆ ಇವುಗಳ ಅನುಸಂಧಾನ ಅನುಷ್ಠಾನಗಳು ಆಗಬೇಕೆಂದೂ ಇವುಗಳ ಮೂಲಕ ಭಗವಂತನ ಪರಿಚರಣ ಮಾಡಬೇಕೆಂದೂ ನಿರೂಪಿಸಲಾಗಿದೆ.

**ವರ್ಣಾಶ್ರಮಾದಿನಿಯತಕ್ರಮಸೂತ್ರಬದ್ಧಾ**
**ಭಕ್ತ್ಯಾ ಯಥಾರ್ಹವಿನಿವೇಶಿತಪತ್ರಪುಷ್ಪಾ ।**
**ಮಾಲೇವ ಕಾಲವಿಹಿತಾ ಹೃದಯಂಗಮಾ ತ್ವಾ-**
**ಮಾಮೋದಯತ್ಯನುಪರಾಗಧಿಯಾಂ ಸಪರ್ಯಾ** ॥೩೩॥

(ವರ್ಣಾಶ್ರಮಾದಿ) ಚಾತುರ್ವರ್ಣ್ಯ ಮತ್ತು ಬ್ರಹ್ಮಚರ್ಯಾದ್ಯಾಶ್ರಮಗಳಿಗೆ, (ನಿಯತಕ್ರಮಸೂತ್ರ) ಕ್ಲೃಪ್ತವಾದ ಧರ್ಮಗಳ ಹಾರದಿಂದ, (ಬದ್ಧ) ಕಟ್ಟಲ್ಪಟ್ಟುದೂ, (ಭಕ್ತ್ಯಾ) ತುಂಬಿದ ಭಕ್ತಿಯಿಂದ, (ಯಥಾರ್ಹ) ಅರ್ಹವಾಗುವ ರೀತಿಯಲ್ಲಿ, (ನಿವೇಶಿತ) ಸಮರ್ಪಿಸಲ್ಪಟ್ಟ, (ಪತ್ರಪುಷ್ಪ) ಪತ್ರಪುಷ್ಪ ಮೊದಲಾದುವನ್ನೊಳಗೊಂಡುದೂ (ಕಾಲವಿಹಿತಾ) ಸಕಾಲದಲ್ಲಿ ರಚಿಸಲ್ಪಟ್ಟುದೂ, (ಹೃದಯಂಗಮಾ) ಮನಸ್ಸಂತೋಷಕರವೂ ಆದ, (ಅನುಪರಾಗ ಧಿಯಾಂ) ರಾಗದ್ವೇಷಗಳಿಂದ ದೂಷಿತವಾಗದ ಬುದ್ಧಿಯುಳ್ಳವರ (ಸಪರ್ಯಾ) ಪೂಜೆಯು, (ತ್ವಾಂ) ನಿನ್ನನ್ನು, (ಮಾಲೇವ) ಕ್ರಮವಾದ ಸೂತ್ರದಿಂದ ಕಟ್ಟಲ್ಪಟ್ಟ ಹೃದಯಂಗಮವಾದ ಪುಷ್ಪಮಾಲಿಕೆಯಂತೆ, (ಆಮೋದಯತಿ) ಸಂತೋಷಪಡಿಸುತ್ತದೆ.

ಈ ಶ್ಲೋಕದಲ್ಲಿ ವರ್ಣಾಶ್ರಮಾದಿ ಕರ್ಮಗಳ ರೂಪದಿಂದ ಮಾಡುವ ಆರಾಧನದ ವಿಷಯ ಉಕ್ತವಾಗಿದೆ. ಭಕ್ತನು 'ಸ್ವೇಸ್ವೇ ಕರ್ಮಣ್ಯಭಿರತಃ' ಎಂದೂ 'ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ' ಎಂದೂ ಹೇಳಿರುವಂತೆ ತನಗೆ ನಿಯತವಾದ ವರ್ಣಾಶ್ರಮಾನುಗುಣವಾದ ಕರ್ಮಧರ್ಮಗಳನ್ನು ಅನುಷ್ಠಿಸಬೇಕು. ಇವು ಭಗವಂತನ ಆಜ್ಞಾರೂಪವಾದುವು. 'ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ' ಎಂದೂ 'ಶ್ರುತಿ ಸ್ಮೃತಿರ್ಮಮೈವಾಜ್ಞಾ ಯಸ್ತಾಮುಲ್ಲಂಘ್ಯ ವರ್ತತೇ। ಆಜ್ಞಾಚ್ಛೇದಿ ಮಮ ದ್ರೋಹೀ ಮದ್ಭಕ್ತೋಽಪಿ ನ ವೈಷ್ಣವಃ', ಎಂದೂ 'ನಿಜಕರ್ಮಾದಿ ಭಕ್ತ್ಯಂತಮ್' ಎಂದೂ ಹೇಳಿರುವಂತೆ ವರ್ಣಾಶ್ರಮ ಧರ್ಮಗಳ ಪಾಲನೆ ಸಾಧನಾನುಷ್ಠಾನಗಳಿಗೆ ಅತ್ಯಂತ ಅವಶ್ಯಕ. ಇವುಗಳ ಅನುಷ್ಠಾನದೊಡನೆ ಮಾಡುವ ಭಕ್ತಿ ಭಗವಂತನನ್ನು ಸಂತೋಷಪಡಿಸುವುದು. ರಾಗಾದಿಗಳಿಂದ ಅದೂಷಿತವಾದ ಹೃದಯವುಳ್ಳವರು ಭಗವಂತನಿಗೆ ಪ್ರಿಯತಮರು ;

'ಯಸ್ಮಾನ್ನೋ ದ್ವಿಜತೇ ಲೋಕಃ ಲೋಕಾನ್ನೋ ದ್ವಿಜತೇ ಚ ಯಃ |
ಹರ್ಷಾಮರ್ಷಭಯೋದ್ವೇಗೈಃ ಮುಕ್ತೋ ಯಃ ಸ ಚ ಮೇ ಪ್ರಿಯಃ ||'
ಎಂದು ಭಗವಾನ್ ಕೃಷ್ಣಪರಮಾತ್ಮನು ತಾನೇ ಹೇಳಿದ್ದಾನೆ. ಭಗವಂತನಿಗೆ ಬಹಳ ಪ್ರಿಯವಾದ ಪೂಜೆಯ ವಿಚಾರವನ್ನು—

ಅಹಿಂಸಾ ಪ್ರಥಮಂ ಪುಷ್ಪಂ ಪುಷ್ಪಮಿಂದ್ರಿಯ ನಿಗ್ರಹಃ |
ಸರ್ವಭೂತದಯಾಪುಷ್ಪಂ ಕ್ಷಮಾಪುಷ್ಪಂ ವಿಶೇಷತಃ ||
ಜ್ಞಾನಂ ಪುಷ್ಪಂ ತಪಃ ಪುಷ್ಪಂ ಧ್ಯಾನಂ ಪುಷ್ಪಂ ತಥೈವಚ |
ಸತ್ಯಂ ಅಷ್ಟವಿಧಂ ಪುಷ್ಪಂ ವಿಷ್ಣೋಃ ಪ್ರೀತಿಕರಂ ಭವೇತ್ ||

ಎಂದು ವರ್ಣಿಸಿದ್ದಾರೆ.

ಬ್ರಹ್ಮಾ ಗಿರೀಶ ಇತರೇಽಪ್ಯಮರಾ ಯ ಏತೇ
ನಿರ್ಧೂಯ ತಾನ್ನಿರಯತುಲ್ಯಫಲಪ್ರಸೂತೀನ್ |
ಪ್ರಾಪ್ತುಂ ತವೈವ ಪದಪದ್ಮಯುಗಂ ಪ್ರತೀತಾಃ
ಪಾತಿವ್ರತೀಂ ತ್ವಯಿ ವಹನ್ತಿ ಪರಾವರಜ್ಞಾಃ ||೩೪||

(ನಿರಯ ತುಲ್ಯಫಲ ಪ್ರಸೂತೀನ್) ನರಕಸದೃಶವಾದ ಫಲಗಳನ್ನು ಕೊಡುವ, (ಬ್ರಹ್ಮ) ಚತುರ್ಮುಖ ಬ್ರಹ್ಮ, (ಗಿರೀಶಃ) ರುದ್ರ, (ಇತರೇಪಿ ಅಮರಾಃ) ಇತರ ದೇವತೆಗಳು ಮೊದಲಾದ, (ಯೇ ಏತೇ) ಇವರುಗಳು ಯಾರುಂಟೋ ಅಂಥ, (ತಾನ್) ಅವರನ್ನೆಲ್ಲ, (ನಿರ್ಧೂಯ) ಪರಿತ್ಯಾಗಮಾಡಿ, (ಪ್ರತೀತಾಃ) ಪ್ರಸಿದ್ಧರಾದ, (ಪರಾವರಜ್ಞಾಃ) ಉತ್ತಮನು ಯಾರು ಅಧಮನು ಯಾರು ಎಂಬುದನ್ನರಿತ ಉತ್ತಮಾಧಿಕಾರಿಗಳು, (ತವಪದಪದ್ಮ ಯುಗಂ ಏವ) ನಿನ್ನ ಚರಣಾರವಿಂದಗಳನ್ನೇ, (ಪ್ರಾಪ್ತುಂ) ಪಡೆಯಲು, (ತ್ವಯಿ) ಸರ್ವಶಕ್ತನೂ ಸರ್ವರಕ್ಷಕನೂ ಆದ ನಿನ್ನಲ್ಲಿ, (ಪಾತಿವ್ರತೀಂ) ಪತಿವ್ರತಾ ಧರ್ಮವನ್ನು, (ವಹಂತಿ) ವಹಿಸುತ್ತಾರೆ.

ದೇವತಾಂತರ ಭಜನೆಯನ್ನು ಮಾಡುವವರು ಮಧ್ಯಮಾಧಿಕಾರಿಗಳು. ಭಗವಂತನನ್ನು ಭಜಿಸಿ ಇತರ ದೇವತೆಗಳನ್ನೂ ಅವರು ಭಜಿಸುವರು. ಆದರೆ ಏಕಾಂತಿಗಳಾದ ಉತ್ತಮಾಧಿಕಾರಿಗಳು ತಮಗೆ ಬೇಕಾದ ಸಕಲ ಪುರುಷಾರ್ಥ ಗಳ ಪ್ರಾಪ್ತಿಗೂ ಸರ್ವಕಾರಣನಾದ ಶ್ರೀಮನ್ನಾರಾಯಣನೊಬ್ಬನನ್ನೇ

ಸೇವಿಸುವರು. ಇನ್ನೂ ಶ್ರೇಷ್ಠರಾದ ಪರಮೈಕಾಂತಿಗಳು ಮತ್ತಾವ ಪ್ರಯೋ ಜನವನ್ನೂ ಗುರಿಯಾಗಿ ಹೊಂದದೆ ಭಗವಂತನ ಚರಣನಳಿನಗಳನ್ನು ಸೇರು ವುದಕ್ಕಾಗಿ ಅವನ ಕೈಂಕರ್ಯದ ಪರಮಾನಂದಕ್ಕಾಗಿ ಭಗವಂತನನ್ನು ಸೇವಿಸುವರು. ಇಂಥ ಅನನ್ಯಪರರೂ ಉತ್ತಮಾಧಿಕಾರಿಗಳೂ ಆದವರ ಹೆಚ್ಚಳವನ್ನಿಲ್ಲಿ ಕೊಂಡಾಡಿದೆ. ಉತ್ತಮಳಾದ ಸತಿ ಹೇಗೆ ತನ್ನ ಪತಿಯೊಬ್ಬ ನಲ್ಲಿಯೇ ನಿರಂತರ ನಿಷ್ಠೆಯನ್ನುಳ್ಳವಳಾಗಿರುತ್ತಾಳೆಯೋ ಹಾಗೆಯೇ ಉತ್ತಮನಾದ ಚೇತನನು ತನ್ನ ಸ್ವಾಮಿಯಾದ ಭಗವಂತನಲ್ಲಿ ಐಕಾಂತ್ಯ ವನ್ನು ಕಾಪಾಡಿಕೊಳ್ಳಬೇಕು.

**ನಾಥ ತ್ವದಿಷ್ಟವಿನಿಯೋಗವಿಶೇಷಸಿದ್ಧಂ**
**ಶೇಷತ್ವಸಾರಮನಪೇಕ್ಷ್ಯ ನಿಜಂ ಗುಣಜ್ಞಾಃ ।**
**ಭಕ್ತೇಷು ತೇ ವರಗುಣಾರ್ಣವ ಪಾರತನ್ತ್ರ್ಯಾ-**
**ದ್ದಾಸ್ಯಂ ಭಜನ್ತಿ ವಿಪಣಿವ್ಯವಹಾರಯೋಗ್ಯಮ್** ॥೩೩॥

(ವರಗುಣಾರ್ಣವ) ಎಲೈ ಕಲ್ಯಾಣಗುಣಸಾಗರನಾದ, (ನಾಥ) ಸ್ವಾಮಿಯೇ, (ತ್ವದಿಷ್ಟ ವಿನಿಯೋಗ ವಿಶೇಷಸಿದ್ಧಂ) ನೀನು ಇಷ್ಟ ಬಂದಂತೆ ಉಪಯೋಗಿಸಿಕೊಳ್ಳಲು ಸಿದ್ಧವಾದ, (ನಿಜಂ) ತಮ್ಮ ಸ್ವರೂಪ ಪ್ರಯುಕ್ತ ವಾದ, (ಶೇಷತ್ವಸಾರಂ) ಶೇಷತ್ವದ ತಿರುಳನ್ನು, (ಅನಪೇಕ್ಷ್ಯ) ಅಪೇಕ್ಷಿಸದೆ, (ಗುಣಜ್ಞಾಃ) ಗುಣಜ್ಞರಾದವರು, (ತೇ ಭಕ್ತೇಷು) ನಿನ್ನ ಭಕ್ತರಲ್ಲಿ, (ಪಾರತಂತ್ರ್ಯಾತ್) ನಿನಗೆ ಪರತಂತ್ರರಾದ ಕಾರಣ, (ವಿಪಣಿವ್ಯವಹಾರ ಯೋಗ್ಯಂ) ಅಂಗಡಿಯಲ್ಲಿ ಕೊಂಡುಮಾರಲು ಅರ್ಹವಾದಂತಹ, (ದಾಸ್ಯಂ) ದಾಸ್ಯವನ್ನು–ಕೈಂಕರ್ಯಭಾವವನ್ನು–(ಭಜಂತಿ) ಅನುಸರಿಸುತ್ತಾರೆ.

ಈ ಶ್ಲೋಕದಲ್ಲಿ ಶ್ರೀಮದಾಚಾರ್ಯರು ಭಾಗವತ ಶೇಷತ್ವನಿಷ್ಠೆ ಯನ್ನು ನಿರೂಪಿಸಿದ್ದಾರೆ, ಜೀವನು ಭಗವಂತನಿಗೆ ಶೇಷಭೂತನೆಂಬುದು ಪ್ರಣವದ ಮಧ್ಯಮಾಕ್ಷರದಿಂದಲೂ ನಮಶ್ಶಬ್ದದಿಂದಲೂ ಸಿದ್ಧವಾಗುತ್ತದೆ. ಹಾಗೆ ಶೇಷಭೂತನಾದ ಜೀವನು ತನ್ನ ಸ್ವರೂಪದಿಂದ ಭಗವಂತನಿಗೆ ಅತಿಶಯವನ್ನುಂಟುಮಾಡುವವನಾಗಿದ್ದಾನೆ. ಬದ್ಧದಶೆಯಲ್ಲಿ ಶಾಸ್ತ್ರಗಳು

ಮೂಲಕವೂ ಮುಕ್ತಾವಸ್ಥೆಯಲ್ಲಿ ಪ್ರತ್ಯಕ್ಷದಿಂದಲೂ ಭಗವಂತನ ಅಭಿಪ್ರಾಯ ವನ್ನು ತಿಳಿದು ಅದಕ್ಕೆ ಅನುರೂಪನಾಗಿ ವರ್ತಿಸುವುದು ಇವನ ಸ್ವರೂಪ. ಭಗವಂತನ ಅಭಿಪ್ರಾಯವನ್ನು ಪರೀಕ್ಷಿಸಿ ನೋಡಿದಲ್ಲಿ ಭಾವಗತ ಕೈಂಕರ್ಯವೇ ಅವನಿಗೆ ಎಲ್ಲಕ್ಕಿಂತಲೂ ಹೆಚ್ಚು ಅಭಿಮತವೆಂಬುದು ಸಿದ್ಧವಾಗುತ್ತದೆ. 'ಮಮ ಮದ್ಭಕ್ತ ಭಕ್ತೇಷು ಪ್ರೀತಿರಭ್ಯಧಿಕಾ ಭವೇತ್ । ತಸ್ಮಾನ್ಮದ್ಭಕ್ತ ಭಕ್ತಾಶ್ಚ ಪೂಜನೀಯಾ ವಿಶೇಷತಃ ॥ ಎಂದೂ 'ಮದ್ಭಕ್ತಜನವಾತ್ಸಲ್ಯಂ' ಎಂದೂ' ಅನನ್ಯದೇವತಾ ಭಕ್ತಾಃ ಯೇ ಮದ್ಭಕ್ತಜನಪ್ರಿಯಾಃ। ಮಾಮೇವ ಶರಣಂ ಪ್ರಾಪ್ತಾಃ ತೇ ಮದ್ಭಕ್ತಾಃ ಪ್ರಕೀರ್ತಿತಾಃ ॥ ಎಂದೂ ಹೇಳಿರುವಂತೆ ಭಗವದ್ಭಕ್ತರಲ್ಲಿ ಭಕ್ತಿಮಾಡುವವನು ಭಗವಂತನಿಗೆ ಪ್ರಿಯತಮನಾಗುತ್ತಾನೆ. 'ಜ್ಞಾನೀತ್ವಾತ್ಮೈವ ಮೇ ಮತಂ' ಎಂದು ಭಗವಂತ ಭಕ್ತರನ್ನು ಸನ್ಮಾನಿಸು ವಂತೆ ಭಕ್ತರ ಭಕ್ತರನ್ನೂ ಸನ್ಮಾನಿಸುತ್ತಾನೆ. ಈ ಭಾಗವತಶೇಷತ್ವ ಭಗವದಿಷ್ಟಸಿದ್ಧವಾಗಿಯೂ ಬರುತ್ತದೆ. ಹಾಗೆಯೇ 'ಗುಣೈ ರ್ದಾಸ್ಯಮುಪಾ ಗತಃ' ಎಂಬಂತೆ ಗುಣಜ್ಞಾನದ ಕಾರಣ ತಮ್ಮ ತಮ್ಮ ಇಷ್ಟಕ್ಕನುಗುಣ ವಾಗಿಯೂ ಸಿದ್ಧವಾಗುತ್ತದೆ. ಈ ಬಗೆಯ ಭಾಗವತಶೇಷತ್ವದಿಂದ ಪರಮೈ ಕಾಂತಿತ್ವಕ್ಕೆ ಭಂಗಬರುವುದಿಲ್ಲವೇ ಎಂಬ ಆಕ್ಷೇಪ ಸಲ್ಲದು. ಏಕೆಂದರೆ ಇದು ಪರಮೈಕಾಂತಿತ್ವಕ್ಕೆ ಉಚಿತವಾದ ಪತಿಚಿತ್ತಾನುವರ್ತನವಾಗಿದೆ. ಭಗವಂತ ನಿಗೆ ತಾನು ಶೇಷಭೂತನೆಂಬ ಜ್ಞಾನದಿಂದ ಬರುವ ಈ ಭಾಗವತಶೇಷತ್ವಕ್ಕೆ ಯಾವ ಬಗೆಯ ಕ್ಷುದ್ರಪ್ರಯೋಜನಾಂತರವೂ ಇರುವುದಿಲ್ಲ. ಈ ಭಾಗವತ ಶೇಷತ್ವ ಮುಕ್ತಾವಸ್ಥೆಯಲ್ಲಿಯೂ ಇರುವ ಕಾರಣ ಸ್ವಾಭಾವಿಕವಾದುದು. ಭಗವಂತನ ಸಂಬಂಧಜ್ಞಾನವಿಶೇಷಣ ಕಾರಣವುಂಟಾಗುವುದರಿಂದ ಔಪಾಧಿಕವೂ ಆಗುತ್ತದೆ. ಭಾಗವತರೊಬ್ಬರಿಗೊಬ್ಬರು ಪರಸ್ಪರ ಶೇಷಭೂತರು ಆಗಿ ಶೇಷಿಗಳೂ ಆಗುವುದರಲ್ಲಿ ಬಾಧಕವೇ ಇಲ್ಲ. ಭಗವಂತನು ತನ್ನ ಸ್ವತಂತ್ರೇಚ್ಛೆಯಿಂದ ಎಲ್ಲ ಭಾಗವತರಿಗೂ ಶೇಷಿತ್ವವನ್ನುಂಟುಮಾಡಿದ್ದಾನೆ. ಎಲ್ಲ ಚೇತನರೂ ಸ್ವಾಮಿಯಾದ ಭಗವಂತನಿಗೆ ಅವನಿಗೆ ಇಷ್ಟಬಂದಂತೆ ಬಳಸಿಕೊಳ್ಳಲು ಅರ್ಹರಾಗಿದ್ದಾರೆ. ಆದ್ದರಿಂದ ಅವನ ಇಚ್ಛೆಯಂತೆ ಶೇಷಿ ತ್ವವೂ ಶೇಷತ್ವವೂ ಅವನಿಗೆ ಉಂಟಾಗುವುದು. ಭಾಗವತಶೇಷತ್ವವೂ ಭಾಗವತ ಕೈಂಕರ್ಯವೂ ಹೀಗೆ ಇವರಿಗೆ ಪುರುಷಾರ್ಥದ ಪರಮಕಾಷ್ಠೆ

ಯಾಗಿದೆ. ಭಾಗವತರಿಬ್ಬರನ್ನೂ ಪರಸ್ಪರ ಶೇಷಿಶೇಷರುಗಳನ್ನಾಗಿ ನಿಯಮಿಸಿ ಸಂತೋಷಿಸುವ ಈಶ್ವರನ ಈಶ್ವರತ್ವವೂ ಭೋಕ್ತೃತ್ವವೂ ಪ್ರಕಾಶವಾಗುತ್ತದೆ. ಹೀಗೆ ಈ ಶ್ಲೋಕದಲ್ಲಿ ಭಾಗವತಶೇಷತ್ವವು ಪರಮನಿಷ್ಠೆಯೆಂದು ಪ್ರತಿಪಾದಿತವಾಗಿದೆ.

**ಸದ್ಭಿಸ್ತ್ವದೇಕಶರಣ್ಯೈರ್ನಿಯತಂ ಸನಾಥಾಃ**
**ಸರ್ಪಾದಿವತ್ತ್ವದಪರಾಧಿಷು ದೂರಯಾತಾಃ ।**
**ಧೀರಾಸ್ತೃಣೀಕೃತವಿರಞ್ಚಿಪುರನ್ದರಾದ್ಯಾಃ**
**ಕಾಲಂ ಕ್ಷಿಪನ್ತಿ ಭಗವನ್ಕರಣೈರವನ್ಧ್ಯೈಃ** ॥೩೬॥

(ಭಗವನ್) ಎಲೈ ಪ್ರಭುವೇ (ತ್ವದೇಕಶರಣ್ಯೈಃ) ನಿನ್ನೊಬ್ಬನೇ ರಕ್ಷಕನೆಂದು ಆಶ್ರಯಿಸಿದ (ಸದ್ಭಿಃ) ಜ್ಞಾನಿಗಳಿಂದ (ನಿಯತಂ ಸನಾಥಾಃ) ನಿಯಮೇನ ರಕ್ಷಕರನ್ನುಳ್ಳವರಾಗಿ, (ತ್ವದಪರಾಧಿಷು) ನಿನಗೆ ವಿರೋಧವಾಗಿ ನಡೆವವರಿಂದ, (ಸರ್ಪಾದಿವತ್ ದೂರಯಾತಾಃ) ಹಾವು ಮೊದಲಾದ ಇವುಗಳಿಂದ ಹೇಗೋ ಹಾಗೆ ದೂರಸರಿದವರಾಗಿ, (ಧೀರಾಃ) ಮಹಾವಿಶ್ವಾಸದಿಂದ ನಿನ್ನಲ್ಲಿ ಶರಣರಾದ ಬುದ್ಧಿಶಾಲಿಗಳು, (ತೃಣೀಕೃತವಿರಂಚಿಪುರಂದರಾದ್ಯಾಃ) ಬ್ರಹ್ಮ, ಇಂದ್ರ ಮುಂತಾದವರನ್ನು ಹುಲ್ಲಿಗೆ ಸಮಾನವಾಗಿ ಎಣಿಸಿ, (ಅವಂಧ್ಯೈಃ) ನಿನ್ನ ಕೈಂಕರ್ಯಾದಿಗಳಿಂದ ಸಫಲವಾದ, (ಕರಣೈಃ) ಇಂದ್ರಿಯಗಳಿಂದ (ಕಾಲಂ ಕ್ಷಿಪನ್ತಿ) ಕಾಲವನ್ನು ನೂಕುತ್ತಾರೆ.

ಲೋಕದಲ್ಲಿ ಅನೇಕರ ನಡುವೆಯೇ ಪ್ರಪನ್ನರೂ ಇರಬೇಕಾಗಿದೆ. ಇವರಾದರೂ ಅನುಕೂಲರು, ಪ್ರತಿಕೂಲರು ಮತ್ತು ಉದಾಸೀನರು ಎಂದು ಮೂರು ಬಗೆ. ಅನುಕೂಲರು ಭಗವದ್ಭಕ್ತರಾದ ಮಹಾನುಭಾವರು. ಇವರನ್ನು ಕಂಡು ಇವರೊಡನೆ ಸೇರಿ, ಇವರನ್ನು ಸೇವಿಸಿ 'ತುಷ್ಯಂತಿ ಚ ರಮಂತಿ ಚ' ಎಂಬ ನ್ಯಾಯದಂತೆ ಆನಂದಮಗ್ನರಾಗಬೇಕು. ಹಾಗೆಯೇ ಭಗವದ್ವೇಷಿಗಳಾದ ಪ್ರತಿಕೂಲರನ್ನು ಕಂಡರೆ ಸರ್ಪ, ಅಗ್ನಿ ಮೊದಲಾದುವುಗಳನ್ನು ಕಂಡರೆ ಹೇಗೊಹಾಗೆ ಹೆದರಿ ದೂರ ಸರಿಯಬೇಕು. ಇನ್ನುಳಿದವರನ್ನು ಲಕ್ಷಿಸಬೇಕಾಗಿಲ್ಲ. ಹೀಗೆ ವರ್ತಿಸದೆ ಇರುವುದಕ್ಕೆ ಅರ್ಥಕಾಮಗಳಲ್ಲಿನ ಪ್ರಾವೀಣ್ಯ

ಕಾರಣವಾಗುತ್ತದೆ. ಯಾವುದಾದರೂ ಕ್ಷುದ್ರಪ್ರಯೋಜನಕ್ಕಾಗಿ ಪ್ರತಿಕೂಲರನ್ನೂ ಆದರಿಸುತ್ತಾರೆ; ಅನುಕೂಲರನ್ನೂ ಅನಾದರಮಾಡುತ್ತಾರೆ. ಹಾಗೆ ಮಾಡುವುದರಿಂದ ಭಗವಂತನ ನಿಗ್ರಹಕ್ಕೆ ಪಾತ್ರವಾಗಬೇಕಾದೀತು. ಆದುದರಿಂದ ಪ್ರಪನ್ನನು ತನ್ನ ವ್ಯವಹಾರದಲ್ಲಿ ಶುದ್ಧನಾಗಿ ತನ್ನ ಸ್ವರೂಪ ನಿಷ್ಠೆಗನುಗುಣವಾಗಿ ವರ್ತಿಸಬೇಕು.

ಅನಾದೃತಸುತಂ ಗೇಹೀ ಪುರುಷಂ ನಾಭಿನಂದತಿ ।
ತಥಾsನರ್ಚಿತ ಸದ್ಭಕ್ತಂ ಭಗವಾನ್ನಾಭಿನಂದತಿ ॥

ಎಂದೂ,

ಮೂರ್ಖೈಃ ಪಾಪರತೈಃ ಕ್ರೂರೈಃ ಭಗವಚ್ಛಾಸ್ತ್ರದೂಷಕೈಃ ।
ಸಂಬಂಧಂ ನಾಚರೇದ್ಭಕ್ತೈರ್ನಶ್ಯತ್ಯೇತೈಸ್ತು ಸಂಗಮೇ ॥

ಎಂದೂ ಇದನ್ನೇ ಹೇಳಿದ್ದಾರೆ. ಹೀಗೆ ಪ್ರಪನ್ನನು ವಿಹಿತವಾದ ಅನುಷ್ಠಾನಗಳಿಂದ ಕಾಲವನ್ನು ತಳ್ಳುತ್ತಾನೆ. ಭಗವಂತನ ನಿತ್ಯಕೈಂಕರ್ಯ ಪ್ರಾಪ್ತಿಯ ಮುಂದೆ ಉಳಿದೆಲ್ಲವೂ ಅಲ್ಪವಾಗುವ ಕಾರಣ ಬ್ರಹ್ಮೇಂದ್ರಾದಿಗಳ ಪದವಿಯನ್ನೂ ಬಯಸನು.

ಕಾಲಕ್ಷೇಪೋsಸ್ತು ನಃ ಸದ್ಭಿಃ ಸಹವಾಸಮುಪೇಯುಷಃ ।
ಸದ್ಭಿಃ ಸಹೈವ ನಿವಸನ್ ಸತ್ಕಥಾಶ್ರವಣೇ ರತಃ ॥

ಎಂಬುದೂ ಇದನ್ನೇ ದೃಢಪಡಿಸುತ್ತದೆ.

**ವಾಗಾದಿಕಂ ಮನಸಿ ತತ್ಪವನೇ ಸ ಜೀವೇ**
**ಭೂತೇಷ್ವಯಂ ಪುನರಸೌ ತ್ವಯಿ ತೈಃ ಸಮೇತಿ ।**
**ಸಾಧಾರಣೋತ್ಕ್ರಮಣಕರ್ಮ ಸಮಾಶ್ರಿತಾನಾಂ**
**ಯನ್ತ್ರಾ ಮುಕುನ್ದ ಭವತೈವ ಯಥಾ ಯಮಾದೇಃ ॥೩೭॥**

(ಮುಕುಂದ) ಎಲೈ ಮುಕುಂದನೇ, (ಯಥಾಯಮಾದೇಃ) ಯಮನಿಗೆ ಅಧೀನರಾಗಿ ಹೋಗುವವರಿಗೆ ಹೇಗೋಹಾಗೆ, (ಯಂತ್ರಾ ಭವತಾ ಏವ) ನಿಯಾಮಕನಾದ ನಿನ್ನಿಂದಲೇ, (ಸಮಾಶ್ರಿತಾನಾಂ) ನಿನ್ನಲ್ಲಿ ಶರಣಾದವರಿಗೂ, (ಸಾಧಾರಣೋತ್ಕ್ರಮಣಕರ್ಮ) ಸಮಾನವಾಗಿ ಪ್ರಾಣಾದಿಗಳ

ಹೊರಹೊರಡುವಿಕೆಯು ಸಂಭವಿಸುತ್ತದೆ. (ವಾಗಾದಿಕಂ) ವಾಗಿಂದ್ರಿಯವೇ ಮೊದಲಾದ ಹತ್ತು ಇಂದ್ರಿಯಗಳೂ, (ಮನಸಿ) ಮನಸ್ಸಿನಲ್ಲಿ. (ತತ್) ದಶೇಂದ್ರಿಯಗಳಿಂದ ಕೂಡಿದ ಆ ಮನಸ್ಸು, (ಪವನೇ) ಪ್ರಾಣವಾಯುವಿನಲ್ಲಿ, (ಸಃ) ಆ ಪ್ರಾಣವಾಯುವು, (ಜೀವೆ) ಜೀವನೊಡನೆಯೂ. (ಅಯಂಪುನಃ) ಈ ಜೀವನು, (ಭೂತೇಷು) ಪಂಚಭೂತಸೂಕ್ಷ್ಮಗಳೊಡನೆಯೂ ಸೇರಿದ ಮೇಲೆ, (ಅಸೌ) ಇಂದ್ರಿಯ ಪ್ರಾಣಭೂತಸೂಕ್ಷ್ಮಗಳೊಡನೆ ಸಂಯುಕ್ತನಾದ ಜೀವನು, (ತ್ವಯಿ) ನಿನ್ನಲ್ಲಿ, (ಸಮೇತಿ) ಸೇರಿಕೊಳ್ಳುತ್ತಾನೆ.

ಈ ಶ್ಲೋಕದಲ್ಲಿ ಉತ್ಕ್ರಾಂತಿಪ್ರಕಾರವನ್ನು ನಿರೂಪಿಸುತ್ತಿದ್ದಾರೆ. ಕರ್ಮಕ್ಕಧೀನವಾಗಿ ಬಂದಿರುವ ಈ ಶರೀರದಿಂದ ಜೀವನು ಉತ್ಕ್ರಾಂತಿಯಾಗುವಂತೆ ಮಾಡುವವನೂ ಹಾರ್ದನಾದ ಭಗವಂತನೇ. ಅವನು ಶರೀರದ ಸೆರೆಯಿಂದ ಜೀವನನ್ನು ಮುಕ್ತಗೊಳಿಸುವ ಕ್ರಮವನ್ನು ಇಲ್ಲಿ ತಿಳಿಸಿದೆ ಈ ಉತ್ಕ್ರಾಂತಿಪ್ರಕಾರ ಎಲ್ಲರಿಗೂ ಒಂದೇ ರೀತಿಯಾದುದು. ಬ್ರಹ್ಮವಿತ್ತುಗಳಿಗೂ ಅಬ್ರಹ್ಮವಿತ್ತುಗಳಿಗೂ ಇದು ಸಮಾನವಾಗಿ ಸಂಭವಿಸುವುದು. 'ಅವ್ಯಕ್ತಂ ಅಕ್ಷರೇ ಲೀಯತೆ ; ಅಕ್ಷರಂ ತಮಸಿ ; ತಮಃ ಪರೇದೇವೇ ಏಕೀಭವತಿ' ಎಂಬುದರ ನಿರೂಪಣೆಯನ್ನಿಲ್ಲಿ ಕಾಣಬಹುದು.

**ಸವ್ಯಾನ್ಯಯೋರಯನಯೋರ್ನಿಶಿ ವಾಸರೇ ವಾ**
**ಸಂಕಲ್ಪಿತಾಯುರವಧೀನ್ತ್ಸಪದಿ ಪ್ರಪನ್ನಾನ್ ।**
**ಹಾರ್ದಃ ಸ್ವಯಂ ನಿಜಪದೇ ವಿನಿವೇಶಯಿಷ್ಯ-**
**ನ್ನಾಡೀಂ ಪ್ರವೇಶಯಸಿ ನಾಥ ಶತಾಧಿಕಾಂ ತ್ವಮ್ ॥೩೮॥**

(ನಾಥ) ಎಲೈ ಒಡೆಯನೇ, (ಸವ್ಯಾನ್ಯಯೋಃ) ದಕ್ಷಿಣಾಯನದಲ್ಲಾಗಲಿ ಉತ್ತರಾಯಣದಲ್ಲಾಗಲಿ, (ದಿಶಿ ವಾಸರೇವಾ) ರಾತ್ರಿ ಅಥವಾ ಹಗಲಿನಲ್ಲಾಗಲಿ, (ಸಂಕಲ್ಪಿತಾಯುರವಧೀನ್) ನಿನ್ನ ಸಂಕಲ್ಪಕ್ಕೆ ಅನುಗುಣವಾದ ಆಯುಃ ಪರಿಮಿತಿಯುಳ್ಳ, (ಪ್ರಪನ್ನಾನ್) ಶರಣಾಗತರನ್ನು, (ಹಾರ್ದಃ ತ್ವಮ್) ಸರ್ವಾಂತರ್ಯಾಮಿಯಾದ ನೀನು, (ನಿಜಪದೇ) ನಿನ್ನ ಅಪ್ರಾಕೃತ ಲೋಕದಲ್ಲಿ, (ವಿನಿವೇಶಯಿಷ್ಯನ್) ಇಡಲಿಚ್ಛಿಸಿದವನಾಗಿ,

(ಸಪದಿ) ಕೂಡಲೇ, (ಶತಾಧಿಕಾಂ ನಾಡಿಂ) ಉತ್ಕ್ರಾಂತಿಕಾಲದಲ್ಲಿ ನೂರೊಂದನೆಯದಾದ ಬ್ರಹ್ಮನಾಡಿಯಲ್ಲಿ, (ಸ್ವಯಂ ಪ್ರವೇಶಯಸಿ) ಇಂದ್ರಿಯ ಪ್ರಾಣಭೂತಸೂಕ್ಷ್ಮಗಳೊಡನೆ ಸಂಯುಕ್ತರಾದ ಜೀವರನ್ನು ಸ್ವತಃ ಪ್ರವೇಶಗೊಳಿಸುತ್ತೀಯೆ.

ಹಿಂದಿನ ಶ್ಲೋಕದಲ್ಲಿ ಬ್ರಹ್ಮಜ್ಞಾನಿಗಳಾದವರು ಆಗದವರು ಇವರಿಗೆಲ್ಲ ಸಮಾನವಾದ ಉತ್ಕ್ರಾಂತಿಕ್ರಮವನ್ನು ಹೇಳಿದರು. ಈ ಶ್ಲೋಕದಲ್ಲಿ ಬ್ರಹ್ಮಜ್ಞರಾದ ಪ್ರಪನ್ನರು ಶರೀರವನ್ನು ತ್ಯಜಿಸಿ ಭಗವಂತನನ್ನು ಸೇರುವ ಬಗೆಯನ್ನು ತಿಳಿಸುತ್ತಾರೆ.

ಅಥೋಪಾಯ ಪ್ರಸಕ್ತೋಽಪಿ ಭುಕ್ತ್ವಾಭೋಗಾನಸಾಮಯಾನ್ ।
ಅನ್ತೇ ವಿರಕ್ತಿಮಾಸಾದ್ಯ ವಿಶತೇ ವೈಷ್ಣವಂ ಪದಮ್ ॥

ಎಂದು ಹೇಳಿರುವಂತೆ ಪ್ರಪನ್ನನಿಗೆ ವೈರಾಗ್ಯವು ತಲೆದೋರುವವರೆಗೆ ಮುಕ್ತಿಗೆ ಸಾವಕಾಶವಾಗಬಹುದು. ಆಯಾ ಶರೀರದ ಸಂಬಂಧ ಕಳೆಯುವುದೇ ಮೋಕ್ಷಕ್ಕೆ ಅವಧಿಯಾಗಿರುತ್ತದೆ. ಪ್ರಪತ್ತಿ ಮಾಡುವಾಗ ಪೂರ್ಣವಾದ ಮಹಾವಿಶ್ವಾಸವಿದ್ದರೆ ಮುಂದೆ ಬುದ್ಧಿದೌರ್ಬಲ್ಯವೇ ಉಂಟಾಗದು. ಮುಂದೆ ದೇವತಾಂತರಸ್ಪರ್ಶವಾಗಲಿ ಉಪಾಯಾಂತರದಲ್ಲಿ ಆಸೆಯಾಗಲಿ ಉಂಟಾದಲ್ಲಿ ಅವರ ವಿಶ್ವಾಸ ಮಂದವಾಗಿದೆಯೆಂದು ಅರಿಯಬಹುದು. ಸರ್ವೇಶ್ವರನು ಇವುಗಳನ್ನು ಕ್ರೋಢೀಕರಿಸಿ ಮಹಾವಿಶ್ವಾಸಗಳುಂಟಾಗುವಂತೆ ಮಾಡಿ ಪೂರ್ಣಪ್ರಪತ್ತಿನಿಷ್ಠರನ್ನಾಗಿ ಮಾಡುತ್ತಾನೆ. ಇಂಥ ವೈಪರೀತ್ಯಗಳುಂಟಾಗದವರಿಗೆ ಮೋಕ್ಷಕ್ಕೆ ವಿಳಂಬವಾಗುವ ಶಂಕೆಯೂ ಇಲ್ಲ. ಏಕೆಂದರೆ ಅಂಥ ಪ್ರಪನ್ನರಿಗೆ ಕೋರಿದ ಕಾಲದಲ್ಲಿ ಮೋಕ್ಷ ಸಿದ್ಧ. ರಾತ್ರಿ, ಹಗಲು, ದಕ್ಷಿಣಾಯನ, ಉತ್ತರಾಯಣ ಎಂಬ ಭೇದ ಇವರಿಗಿಲ್ಲ. ಹಗಲು, ಶುಕ್ಲ ಪಕ್ಷ, ಉತ್ತರಾಯಣಗಳು ನಿರ್ಯಾಣಕ್ಕೆ ಪ್ರಶಸ್ತವಾದುವು ಎಂಬುದು ಫಲಾಂತರ ಪ್ರಸಕ್ತರಿಗೂ ಮೋಕ್ಷೋಪಾಯವನ್ನು ಪೂರ್ಣವಾಗಿ ಅನುಷ್ಠಿಸದವರಿಗೂ ಅನ್ವಯಿಸುತ್ತದೆ. 'ನಿಶಿನೇತಿ ಚೇನ್ನ ಸಂಬಂಧಸ್ಯ ಯಾವದ್ದೇಹಭಾವಿತ್ವಾತ್,' 'ಅತಶ್ಚಾಯನೇಽಪಿ ದಕ್ಷಿಣೇ' ಮುಂತಾದ ಸೂತ್ರಗಳು ಇದನ್ನೇ ಸಮರ್ಥಿಸುತ್ತವೆ. ಪ್ರಪನ್ನನು ಅಪೇಕ್ಷಿಸಿದ ಕಾಲದಲ್ಲಿ ಅವನಿಗೆ ಮೋಕ್ಷವು ಸಂಭವಿಸುವುದರಲ್ಲಿ ಸಂಶಯವಿಲ್ಲ. ಈ ಶ್ಲೋಕದ ಉತ್ತರಾರ್ಧದಲ್ಲಿ

ಬ್ರಹ್ಮಜ್ಞನ ಉತ್ಕ್ರಾಂತಿ ಕ್ರಮ ಹೇಳಿದೆ. ಹಿಂದಿನ ಶ್ಲೋಕದಲ್ಲಿ ಹೇಳಿದ ರೀತಿಯಲ್ಲಿ ಇಂದ್ರಿಯ, ಪ್ರಾಣವಾಯು, ಭೂತಸೂಕ್ಷ್ಮಗಳು ಇವುಗಳೊಡನೆ ಸಂಯುಕ್ತವಾದ ಪ್ರಪನ್ನನನ್ನು ಸಹಜವಾದ ಸೌಹಾರ್ದವನ್ನು ಹೊಂದಿರುವ ದೇವನು ಶ್ರಮವನ್ನು ಹೋಗಲಾಡಿಸಿ ಸ್ಥೂಲಶರೀರದಿಂದ ಹೊರಹೊರಡಿಸಿ ಅರ್ಚಿರಾದಿ ಮಾರ್ಗಕ್ಕೆ ಬಾಗಿಲೆನಿಸಿದ ಬ್ರಹ್ಮನಾಡಿಯಲ್ಲಿ ಪ್ರವೇಶಗೊಳಿಸಿ ಸೂರ್ಯನ ಕರಾವಲಂಬನದಿಂದ ಮುಂದುವರಿಯುವಂತೆ ಮಾಡುತ್ತಾನೆ.

ಅನಂತಾರಶ್ಮಯಸ್ತಸ್ಯ ದೀಪವದ್ಯಃ ಸ್ಥಿತೋ ಹೃದಿ ।
ಸಿತಾಸಿತಾಃ ಕದ್ರುನೀಲಾಃ ಕಪಿಲಾಃ ಪೀತಲೋಹಿತಾಃ ॥
ಊರ್ಧ್ವಮೇಕಃಸ್ಥಿತಸ್ತೇಷಾಂ ಯೋ ಭಿತ್ವಾ ಸೂರ್ಯಮಂಡಲಮ್ ।
ಬ್ರಹ್ಮಲೋಕಮತಿಕ್ರಮ್ಯ ತೇ ನಯಾಂತಿ ಪರಾಂಗತಿಮ್ ॥

ಎಂದೂ 'ಶತಂಚೈಕಾಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿ ನಿಃಸೃತೈಕಾ । ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಙ್ಙನ್ಯಾ ಉತ್ಕ್ರಮಣೋ ಭವಂತಿ ॥' ಎಂದೂ ಹೇಳಿರುವಂತೆ ಹೃದಯದಲ್ಲಿನ ನೂರು ನಾಡಿಗಳಿಗಿಂತ ಬೇರೆಯಾದ ಬ್ರಹ್ಮನಾಡಿಯಲ್ಲಿ ಜೀವನು ಪ್ರವೇಶಿಸಿ ಹೊರಹೊರಡುತ್ತಾನೆ. ಹಾರ್ದನಾದ ಕರುಣಾಳು ಇತರ ನಾಡಿಗಳಲ್ಲಿ ಇವನು ಉತ್ಕ್ರಮಿಸಿದಂತೆಯೂ ಬ್ರಹ್ಮನಾಡಿಯಲ್ಲಿಯೇ ಬರುವಂತೆಯೂ ಮಾರ್ಗದರ್ಶನಮಾಡಿ ಉಪಕರಿಸುತ್ತಾನೆ. ಹೀಗೆ ಭಗವಂತನ ಪರಮೋಪಕಾರತ್ವವನ್ನು ಇಲ್ಲಿ ಕೊಂಡಾಡಿದೆ.

**ಅರ್ಚಿರ್ದಿನಂ ವಿಶದಪಕ್ಷ ಉದಕ್ಪ್ರಯಾಣಂ**
**ಸಂವತ್ಸರೋ ಮರುದಶೀತಕರಃ ಶಶಾಙ್ಕಃ ।**
**ಸೌದಾಮನೀ ಜಲಪತಿರ್ವಲಜಿತ್ಪ್ರಜೇಶ**
**ಇತ್ಯಾತಿವಾಹಿಕಸಖೋ ನಯಸಿ ಸ್ವಕೀಯಾನ್ ॥೩೯॥**

(ಅರ್ಚಿಃ) ಅಗ್ನಿ, (ದಿನಂ) ಹಗಲು, (ವಿಶದಪಕ್ಷ) ಶುಕ್ಲಪಕ್ಷ, (ಉದಕ್ಪ್ರಯಾಣಂ) ಉತ್ತರಾಯಣ, (ಸಂವತ್ಸರ) ವರ್ಷ, (ಮರುತ್) ವಾಯು, (ಅಶೀತಕರಃ) ಸೂರ್ಯ, (ಶಶಾಂಕಃ) ಚಂದ್ರ, (ಸೌದಾಮಿನೀ)

ವಿದ್ಯುತ್, (ಜಲಪತಿಃ) ವರುಣ, (ವಲಜಿತ್) ಇಂದ್ರ, (ಪ್ರಜೇಶಃ) ಪ್ರಜಾಪತಿ, (ಇತಿ) ಇವರೇ ಮೊದಲಾದ, (ಅತಿವಾಹಕಸಖಃ) ಅತಿವಾಹಕರನ್ನು ಸಖರನ್ನಾಗಿ ಹೊಂದಿರುವ ನೀನು, (ಸ್ವಕೀಯಾನ್) ನಿನ್ನವರನ್ನು, (ನಯಸಿ) ನಿನ್ನೆಡೆಗೆ ನಡೆಸಿಕೊಳ್ಳುತ್ತೀಯೆ.

ಹಿಂದಿನ ಶ್ಲೋಕದಲ್ಲಿ ಉತ್ಕ್ರಾಂತಿ ಪ್ರಕಾರವನ್ನು ಹೇಳಿದರು. ಈ ಶ್ಲೋಕದಲ್ಲಿ ಪೂರ್ವೋಕ್ತ ಕ್ರಮದಲ್ಲಿ ಮೂರ್ಧನ್ಯ ನಾಡಿಯಲ್ಲಿ ಪ್ರವೇಶಿಸಿದ ಮುಮುಕ್ಷುವನ್ನು ಆಶ್ರಿತವತ್ಸಲನಾದ ಪರಮಾತ್ಮನು ತನಗೆ ಸಹಕಾರಿಗಳಾದ ಅತಿವಾಹಕರ ಮುಖಾಂತರ ಹೇಗೆ ತನ್ನೆಡೆಗೆ ಕರಸಿಕೊಳ್ಳುವನೆಂಬುದನ್ನು ನಿರೂಪಿಸಿದ್ದಾರೆ. ಬ್ರಹ್ಮವಿತ್ತಾದವನು ಅರ್ಚಿರಾದಿ ಮಾರ್ಗದಿಂದ ಸಾರಿ ಬ್ರಹ್ಮವನ್ನು ಸೇರುತ್ತಾನೆಂದು 'ಯ ಏವಂ ಏತದ್ವಿದುಃ ಯೇಚಾಮೀ ಅರಣ್ಯೇ ಶ್ರದ್ಧಾಂ ಸತ್ಯಮಿತ್ಯುಪಾಸತೇ ತೇಽರ್ಚಿಷಮಭಿಸಂಭವಂತಿ, ಅರ್ಚಿಷೋ ಅಹಃ, ಅಹ್ನಾ ಆಪೂರ್ಯಮಾಣಪಕ್ಷಂ, ಆಪೂರ್ಯಮಾಣ ಪಕ್ಷಾತ್ ಯಾನ್ ಷಣ್ಮಾಸಾನುದಙ್ಙಾದಿತ್ಯ ಏತಿ ಮಾಸೇಭ್ಯೋ ದೇವಲೋಕಂ, ದೇವಲೋಕಾದಾದಿತ್ಯಂ, ಆದಿತ್ಯಾತ್ ವೈದ್ಯುತಂ, ವೈದ್ಯುತಾತ್ ಪುರುಷಃ ಅಮಾನವಸ್ಸ ಏತ್ಯ ಬ್ರಹ್ಮಲೋಕಾನ್ ಗಮಯತಿ' ಎಂದು ಹೇಳಿದೆ. 'ಅರ್ಚಿರಾದಿನಾ ತತ್ಪ್ರಥಿತೇ' ಎಂಬ ಸೂತ್ರದಲ್ಲಿ ಬ್ರಹ್ಮಜ್ಞರು ಅರ್ಚಿರಾದಿ ಮಾರ್ಗವು ಮಾರ್ಗತೋರುವ ಚಿಹ್ನೆಗಳೋ ಅಥವಾ ಮಾರ್ಗದರ್ಶಕರೋ ಎಂಬ ಸಂದೇಹಕ್ಕೆ ಉತ್ತರವನ್ನು 'ಆತಿವಾಹಕಾಸ್ತಲ್ಲಿಂಗಾತ್' ಎಂಬಲ್ಲಿ ಸೂತ್ರಕಾರರು ಕೊಟ್ಟಿದ್ದಾರೆ. ಇವರೆಲ್ಲರೂ ಪರಮಪುರುಷನಿಂದ ನಿಯುಕ್ತರಾದ ಅರ್ಚಿರಾದ್ಯಭಿಮಾನದೇವತೆಗಳು. ಇವರು ಮುಕ್ತನಿಗೆ ಮಾರ್ಗತೋರಿಸಿ ಕರೆದುಕೊಂಡು ಹೋಗುತ್ತಾರೆ

ಪರಮಕರುಣಾಳುವಾದ ಭಗವಂತನು ತನ್ನಲ್ಲಿ ಶರಣು ಹೋದವರನ್ನು 'ಅಹಂ ಸ್ಮರಾಮಿ ಮದ್ಭಕ್ತಂ ನಯಾಮಿ ಪರಮಾಂ ಗತಿಮ್' ಎಂದು ತಾನೇ ಅಭಯಕೊಟ್ಟಂತೆ ತಾನೇ ಪ್ರಧಾನನಾಗಿ ಒಂದು ಎಲ್ಲೆಯಿಂದ ಮತ್ತೊಂದು ಎಲ್ಲೆಯವರೆಗೆ ದಾಟಿಸಿ ತನ್ನ ದಿವ್ಯಧಾಮಕ್ಕೆ ಕರೆದೊಯ್ಯುತ್ತಾನೆ. ಅಗ್ನಿ, ದಿವಸ, ಜ್ಯೋತ್ಸ್ನಾ, ಪಕ್ಷ, ಉತ್ತರಾಯಣ, ವತ್ಸರ ಮೊದಲಾದ ಆಯಾ ಅಭಿಮಾನ ದೇವತೆಗಳಿಂದಲೂ ವಾಯುವಿನಿಂದಲೂ 'ಸರ್ವೇಸ್ಮೈದೇವಾ

ಬಲಿಮಾವಹಂತಿ' ಎಂಬಂತೆ ಸತ್ಕೃತನಾಗಿ ಮುಕ್ತನು ಸೂರ್ಯಮಂಡಲವನ್ನೂ ಭೇಧಿಸಿಕೊಂಡು ನಭೋರಂಧ್ರದ್ವಾರದಿಂದ ಸೂರ್ಯಲೋಕಕ್ಕೆ ಹೋಗಿ ಅನಂತರ ಚಂದ್ರ, ವಿದ್ಯುತ್, ವರುಣ, ಇಂದ್ರ ಮತ್ತು ಪ್ರಜಾಪತಿಗಳಿಂದ ಆದರೋಪಚಾರಪೂರ್ವಕವಾಗಿ ಆಯಾ ಲೋಕಗಳಲ್ಲಿ ದಾರಿ ತೋರಿಸಲ್ಪಟ್ಟವನಾಗಿ ಪ್ರಕೃತಿ ಮಂಡಲಕ್ಕೂ ವೈಕುಂಠಕ್ಕೂ ಎಲ್ಲೆಯಾಗಿರುವ ವಿರಜಾ ನದಿಯನ್ನು ದಾಟಿ ಸೂಕ್ಷ್ಮಶರೀರವನ್ನೂ ಬಿಸುಟು ಅಮಾನವಕರ ಸ್ಪರ್ಶದಿಂದ ಅಪ್ರಾಕೃತವಾದ ದಿವ್ಯ ವಿಗ್ರಹವನ್ನು ಪಡೆದು ಬ್ರಹ್ಮಾಲಂಕಾರವನ್ನು ಹೊಂದಿ ಶ್ರೀವೈಕುಂಠವನ್ನು ಪ್ರವೇಶಿಸಿ 'ಐರಮ್ಮದೀಯ' ವೆಂಬ ಸರೋವರವನ್ನೂ 'ಸೋಮಸವನ'ವೆಂಬ ಅಶ್ವತ್ಥವನ್ನೂ ಸಂದರ್ಶಿಸುತ್ತಾನೆ. 'ಶತಂಮಾಲಾಹಸ್ತಾಃ' ಎಂಬಂತೆ ಐನೂರು ದಿವ್ಯಾಪ್ಸರೆಯರಿಂದ ಸತ್ಕೃತನಾಗುತ್ತಾನೆ. ಆಗ ಅವರೇ ಬ್ರಹ್ಮಾಲಂಕಾರ ಮಾಡುವರು. ಬ್ರಹ್ಮಗಂಧರಸ ತೇಜಸ್ಸುಗಳು ಇವನಲ್ಲಿ ಪ್ರವೇಶಿಸುವುವು. ಹೀಗೆ ಭಗವದನುಭವಕ್ಕಿದ್ದ ಪ್ರತಿಬಂಧಕಗಳೆಲ್ಲ ನಿವಾರಣೆಯಾಗಲು ಸ್ವಸ್ವರೂಪಾವಿರ್ಭಾವದಿಂದ ಭಾಗ್ಯಶಾಲಿಯಾದ ಮುಕ್ತನು 'ವಾಚಸ್ತತಃಪರಮದ್ಭುತಮ್' ಎಂಬಂತೆ ವರ್ಣಿಸಲಸಾಧ್ಯವಾದ ಪರಮಾತ್ಮನೊಡನೆ ನಿತ್ಯಸಂಶ್ಲೇಷವನ್ನು ಹೊಂದಿ ಭಗವದಭಿಮತವಾದ ನಿತ್ಯಕೈಂಕರ್ಯಗಳ ಪರಮಲಾಭವನ್ನು ಪಡೆದು ಯಾವದಾತ್ಮಭಾವಿಯಾದ ಮಹದಾನಂದದಲ್ಲಿ ಮಗ್ನನಾಗುತ್ತಾನೆ. ಈ ಅರ್ಚಿರಾದಿ ಗತಿಯ ಚಿಂತನೆ ಪ್ರಪನ್ನನಿಗೆ ಪ್ರೀತ್ಯತಿಶಯವನ್ನುಂಟುಮಾಡಿ ಸ್ವಯಂ ಪ್ರಯೋಜನವಾಗಿರುತ್ತದೆ.

ಸಮೀಪಂ ರಾಜಸಿಂಹಸ್ಯ ರಾಮಸ್ಯ ವಿದಿತಾತ್ಮನಃ ।
ಸಂಕಲ್ಪಹಯಸಂಯುಕ್ತೈಃ ಯಾಂತೀಮಿವ ಮನೋರಥೈಃ ॥

ಎಂಬಂತೆ ಇವನೂ ಗತಿಚಿಂತನೆಯನ್ನು ಅನುಸಂಧಾನಮಾಡುವುದು ಪ್ರಾಪ್ತವಾಗುತ್ತದೆ.

**ತ್ವಚ್ಛೇಷವೃತ್ತ್ಯನುಗುಣೈರ್ಮಹಿತೈರ್ಗುಣೌಘೈ-**
**ರಾವಿರ್ಭವತ್ಯಯುತಸಿದ್ಧ ನಿಜಸ್ವರೂಪೇ ।**
**ತ್ವಲ್ಲಕ್ಷಣೇಷು ನಿಯತೇಷ್ವಪಿ ಭೋಗಮಾತ್ರೇ**
**ಸಾಮ್ಯಂ ಭಜನ್ತಿ ಪರಮಂ ಭವತಾ ವಿಮುಕ್ತಾಃ ॥೪೦॥**

(ತ್ವಚ್ಛೇಷವೃತ್ತ್ಯನುಗುಣೈಃ) ನಿನ್ನಲ್ಲಿ ಶೇಷವೃತ್ತಿಯಾದ ಕೈಂಕರ್ಯ ವನ್ನು ಮಾಡಲು ಅನುರೂಪವಾದುವೂ, (ಮಹಿತೈಃ) ಮಹತ್ತ್ವವುಳ್ಳವೂ ಆದ, (ಗುಣೌಘೈಃ) ಕಲ್ಯಾಣಗುಣಗಳ ಸಮೂಹದಿಂದ ಕೂಡಿ, (ಅಯುತಸಿದ್ಧ) ಸಹಜಸಿದ್ಧವಾದ, (ನಿಜಸ್ವರೂಪೇ) ಸ್ವಸ್ವರೂಪವು, (ಆವಿರ್ಭವತಿ) ಆವಿರ್ಭವ ವಾಗಲು, (ತ್ವಲ್ಲಕ್ಷಣೇಷು) ನಿನ್ನ ಲಕ್ಷಣಗಳು, (ನಿಯತೇಷ್ವಪಿ) ನಿಯಮೇನ ಉಂಟಾದರೂ, (ಭವತಾ ವಿಮುಕ್ತಾಃ) ನಿನ್ನಿಂದ ಬಿಡುಗಡೆಮಾಡಲ್ಪಟ್ಟ ಮುಕ್ತಾತ್ಮರು, (ಭೋಗಮಾತ್ರೆ) ಆನಂದಾನುಭವದಲ್ಲಿ ಮಾತ್ರ, (ಪರಮಂ ಸಾಮ್ಯಂ) ನಿನ್ನೊಡನೆ ಪರಮಸಾಮ್ಯವನ್ನು, (ಭಜಂತಿ) ಹೊಂದುತ್ತಾರೆ. ಈ ಶ್ಲೋಕದಲ್ಲಿ ಬ್ರಹ್ಮಾನುಭವಪ್ರಕಾರವನ್ನು ನಿರೂಪಿಸಿದ್ದಾರೆ.

ಚೇತನರು ಸಂಸಾರಸಂಬಂಧದಿಂದ ಮುಕ್ತರಾಗಿ ಭಗವಂತನನ್ನು ಸೇರಿದಾಗ ಅವರಲ್ಲಿ ' ಅಪಹತಪಾಪ್ಮಾ ವಿಜರೋ ವಿಮೃತ್ಯುಃ ವಿಶೋಕೋ ವಿಜಿಘಿತ್ಸೋಽಪಿಪಾಸಸ್ಸತ್ಯಕಾಮಸ್ಸತ್ಯಸಂಕಲ್ಪಃ ' ಎಂಬ ಗುಣಾಷ್ಟಕಗಳು ಆವಿರ್ಭವಿಸುವುವು. ಹೀಗೆ ಸ್ವಸ್ವರೂಪಾವಿರ್ಭಾವವಾಗಿ ಶೇಷತ್ವಾನು ಸಂಧಾನಪೂರ್ಣವಾಗಿರುವುದು. ಆಗ ಮುಕ್ತರು ಭಗವಂತನೊಡನೆ ಆನಂದಾನುಭವದಲ್ಲಿ ಮಾತ್ರ ಪರಮಸಾಮ್ಯವನ್ನು ಹೊಂದುತ್ತಾರೆ. ಭಗ ವಂತನ ನಿತ್ಯಕೈಂಕರ್ಯದ ಮಹಾನಂದವನ್ನು ಪಡೆದು ಧನ್ಯರಾಗುತ್ತಾರೆ.

**ಇತ್ಥಂ ತ್ವದೇಕಶರಣೈರನಘೈರವಾಪ್ಯೇ**
**ತ್ವತ್ಕಿಂಕರತ್ವವಿಭವೇ ಸ್ಪೃಹಯಾಽಪರಾಧ್ಯನ್ ।**
**ಆತ್ಮಾ ಮಮೇತಿ ಭಗವನ್ಭವತೈವ ಗೀತಾ**
**ವಾಚೋ ನಿರೀಕ್ಷ್ಯ ಭರಣೀಯ ಇಹ ತ್ವಯಾಽಹಮ್ ॥೪೧॥**

(ಭಗವನ್) ಭಗವಂತನೇ, (ಇತ್ಥಂ) ಹೀಗೆ, (ತ್ವದೇಕಶರಣೈಃ) ನಿನ್ನೊಬ್ಬನನ್ನೇ ರಕ್ಷಕನನ್ನಾಗಿ ಉಳ್ಳ, (ಅನಘೈಃ) ದೋಷರಹಿತರಾದ ಭಕ್ತ ರಿಂದ, (ಅವಾಪ್ಯ) ಪಡೆಯಲ್ಪಡತಕ್ಕ, (ತ್ವತ್ಕಿಂಕರತ್ವ ವಿಭವೇ) ನಿನ್ನ ನಿತ್ಯ ಕೈಂಕರ್ಯದ ವೈಭವದ ವಿಷಯದಲ್ಲಿ (ಸ್ಪೃಹಯಾ) ಆಸೆಪಡುವ ಧಾರ್ಷ್ಟ್ಯ ದಿಂದ, (ಅಪರಾಧ್ಯನ್) ತಪ್ಪುಮಾಡಿರುವ, (ಅಹಂ) ನಾನು, (ಭವತೈವ)

ನಿನ್ನಿಂದಲೇ, (ಆತ್ಮಾಮುಮೇತಿ) ಭಕ್ತನು ನನ್ನ ಆತ್ಮಾ ಎಂದು ನಿರೂಪಿತ ವಾದ, (ಗೀತಾವಾಚಃ) ಗೀತೆಯ ಮಾತುಗಳನ್ನು, (ನಿರೀಕ್ಷ್ಯ) ಗಮನಿಸಿ, (ತ್ವಯಾ) ನಿನ್ನಿಂದ, (ಭರಣೀಯಃ) ಈಗ ರಕ್ಷಿಸಲ್ಪಡಬೇಕು.

ಈ ಶ್ಲೋಕದಲ್ಲಿ ಆಚಾರ್ಯರು ಪುರುಷಾರ್ಥಕಾಷ್ಠೆಯನ್ನು ನಿರೂಪಿಸಿದ್ದಾರೆ. ಭಗವಂತನೇ ನಮ್ಮ ರಕ್ಷಕನೆಂದು ತಿಳಿಸಿದ್ದಾರೆ. ನಮ್ಮ ಅಪರಾಧಗಳನ್ನು ಕ್ಷಮಿಸಿ ನಮ್ಮನ್ನು ಕಾಪಾಡಬೇಕೆಂದು ಅವನಲ್ಲಿ ಬೇಡುವ ರೀತಿಯನ್ನು ತೋರಿದ್ದಾರೆ. ತನಗೆ ಆತ್ಮನೂ ಶೇಷಿಯೂ ಧಾರಕನೂ ಸ್ವಾಮಿಯೂ ಆದ ಭಗವಂತನಲ್ಲಿ ನಿರತಿಶಯವಾದ ಪ್ರೇಮವನ್ನು ಮಾಡಿ ಅವನ ಕೃಪೆಯಿಂದ ಅವನ ನಿತ್ಯಸಂಶ್ಲೇಷವನ್ನು ಪಡೆದ ಭಕ್ತನು ಭಗವದನುಭವದ ಮಹದಾನಂದದಲ್ಲಿ ಮುಳುಗುವನು. ಈ ನಿರತಿಶಯಾನಂದದ ಪರೀವಾಹವೇ ಕೈಂಕರ್ಯ. ಆದ್ದರಿಂದ ಭಗವಂತನ ನಿತ್ಯಕೈಂಕರ್ಯ ಪ್ರಾಪ್ತಿಯೇ ಪರಮ ಪುರುಷಾರ್ಥ.

ಸರ್ವೇಷು ದೇಶಕಾಲೇಷು ಸರ್ವಾವಸ್ಥಾಸು ಚಾಚ್ಯುತ ।
ಕಿಂಕರೋಽಸ್ಮಿ ಹೃಷೀಕೇಶ ಭೂಯೋಭೂಯೋಽಸ್ಮಿ ಕಿಂಕರಃ ॥

'ಕಿಂಕರೋಽಸ್ಮೀತಿಚಾತ್ಮಾನಂ ದೇವಾಯ್ಯೈವಂ ನಿವೇದಯೇತ್' ಎಂದು ಹೇಳಿರುವಂತೆ ಜೀವನು ತನಗೆ ಸ್ವಾಮಿಯಾದ ಭಗವಂತನ ಕೈಂಕರ್ಯವನ್ನು ಪಡೆಯುವುದೇ ಪರಮಪುರುಷಾರ್ಥ.

ಸಾಯುಜ್ಯಂ ಪ್ರತಿಪನ್ನಾ ಯೇ ತೀವ್ರಭಕ್ತಾಸ್ತಪಸ್ವಿನಃ ।
ಕಿಂಕರಾ ಮಮ ತೇ ನಿತ್ಯಂ ಭವಂತಿ ನಿರುಪದ್ರವಾಃ ॥

ಎಂದಂತೆ ಮೋಕ್ಷವನ್ನು ಪಡೆದ ಜೀವರುಗಳು ಸಂಸಾರದ ಸಂಬಂಧವನ್ನು ಪೂರ್ಣವಾಗಿ ಕಳೆದುಕೊಂಡವರಾಗಿ ಭಗವಂತನ ಪ್ರಿಯರಾದ ಕಿಂಕರರಾಗುತ್ತಾರೆ.

ಪಾರತಂತ್ರ್ಯಂ ಪರೇ ಪುಂಸಿ ಪ್ರಾಪ್ಯ ನಿರ್ಗತ ಬಂಧನಃ ।
ಸ್ವಾತಂತ್ರ್ಯಮತುಲಂ ಪ್ರಾಪ್ಯ ತೇನೈವ ಸಹ ಮೋದತೇ ॥

ಎಂದು ಫಲದೆಶೆಯಲ್ಲಿ ಹೇಳಿರುವ ಸ್ವಾತಂತ್ರ್ಯವು ಮುಕ್ತನು ಕರ್ಮವಶ್ಯನಾಗದೇ ಸರ್ವವಿಧ ಕೈಂಕರ್ಯಗಳಿಗೂ ಯೋಗ್ಯನಾಗುವನೆಂಬುದನ್ನು ಸಮರ್ಥಿಸುತ್ತದೆ.

ಗೀತೆಯಲ್ಲಿ ಭಗವಾನ್ ಕೃಷ್ಣನು 'ಜ್ಞಾನೀತ್ವಾತ್ಮೈವ ಮೇ ಮತಂ' ಎಂದು ಜ್ಞಾನಿಯನ್ನು ತನ್ನ ಆತ್ಮವೆಂದು ಹೇಳಿರುವುದನ್ನು ಇಲ್ಲಿ ಆಚಾರ್ಯರು ಭಗವಂತನ ನೆನಪಿಗೆ ತಂದಿದ್ದಾರೆ. 'ಸ್ವರಕ್ಷಣಮಿವಾ ಭವತ್ಪ್ರಣತರಕ್ಷಣಂ ತಾವಕಂ' ಎಂದಂತೆ ಅವನನ್ನಾಶ್ರಯಿಸಿದ ವಿಶ್ವಾಸಶಾಲಿಗಳ ರಕ್ಷಣೆ ಅವನ ಹೊಣೆಯೇ ಆಗಿದೆ. ಅಂತಹವರ ದೋಷಗಳೇನನ್ನೂ ಎಣಿಸದೆ 'ಸಾಧುರೇವ ಸಮಂತವ್ಯಃ' ಎಂಬಂತೆ ಅವನು ಅವರನ್ನು ಕಾಪಾಡುತ್ತಾನೆ.

ಪದ್ಮಾಮಹೀಪ್ರಭೃತಿಭಿಃ ಪರಿಭುಕ್ತಭೂಮ್ನಃ
ಕಾ ಹಾನಿರತ್ರ ಮಯಿ ಭೋಕ್ತರಿ ತೇ ಭವಿತ್ರೀ ।
ದುಷ್ಯೇತ್ಕಿಮಙ್ಘ್ರಿತಟಿನೀ ತವ ದೇವಸೇವ್ಯಾ
ದುರ್ವಾರತರ್ಷಚಪಲೇನ ಶುನಾವಲೀಢಾ ॥೪೨॥

(ಪದ್ಮಾಮಹೀಪ್ರಭೃತಿಭಿಃ) ಶ್ರೀದೇವಿ ಭೂದೇವಿ ಮುಂತಾದವರಿಂದ, (ಪರಿಭುಕ್ತ ಭೂಮ್ನಃ) ಅನುಭವಿಸಲ್ಪಟ್ಟ ಮಹತ್ವವನ್ನು, (ಮಯಿ ಭೋಕ್ತರಿ) ನಾನು ಅನುಭವಿಸುವುದಲ್ಲಿ, (ತೇ) ನಿನಗೆ (ಅತ್ರ ಕಾ ಹಾನಿಃ ಭವಿತ್ರಿ) ಯಾವ ಹಾನಿಯು ತಾನೇ ಉಂಟಾದೀತು? (ದೇವಸೇವ್ಯಾ) ದೇವತೆಗಳಿಂದ ಸೇವಿಸಲ್ಪಡುವ, (ತವ ಅಂಘ್ರಿತಟಿನೀ) ನಿನ್ನ ಪಾದದಿಂದುದ್ಭವಿಸಿದ ಪವಿತ್ರವಾದ ಗಂಗಾನದಿಯು, (ದುರ್ವಾರ ತರ್ಷಚಪಲೇನ) ಸಹಿಸಲಸಾಧ್ಯವಾದ ಬಾಯಾರಿಕೆಯ ಚಾಪಲ್ಯವನ್ನು ಹೊಂದಿದ, (ಶುನಾ) ನಾಯಿಯಿಂದ, (ಅವಲೀಢಾ) ನೆಕ್ಕಲ್ಪಟ್ಟರೆ, (ದುಷ್ಯೇತ್ ಕಿಂ) ದೂಷ್ಯವಾಗುತ್ತದೆಯೇ?

ಭಗವಂತನು ಪತಿತಪಾವನನು. ಸರ್ವಮಂಗಳ ಮಂಗಳನು. ಅವನ ಮಹಿಮೆ ಅಪಾರವಾದುದು. ಅವನ ದಯೆಯ ಲೇಶದ ಸ್ಪರ್ಶ ಯಾವುದನ್ನಾದರೂ ಪವಿತ್ರಗೊಳಿಸುವುದು. ದೇವಗಂಗೆಯು ತನ್ನ ಸ್ಪರ್ಶದಿಂದಲೇ ಎಲ್ಲವನ್ನೂ ಪವಿತ್ರಗೊಳಿಸುವ ಮಹಿಮೆಯುಳ್ಳದು. ಅದರ ಹಾಗೆಯೇ ಅಮರಗಂಗಾಜನಕನೂ ಕೂಡ. ಸಕಲ ಚೇತನಾಚೇತನಗಳಲ್ಲಿಯೂ ಅಂತರಾತ್ಮ

ನಾಗಿರುವ ಈ ದೇವದೇವ ತನ್ನ ಸಾನ್ನಿಧ್ಯದಿಂದ ಅವುಗಳಿಗೆ ಪವಿತ್ರತೆಯನ್ನುಂಟುಮಾಡುತ್ತಿದ್ದಾನೆ, ಅವುಗಳ ದೋಷದಿಂದ ಅಸ್ಪೃಷ್ಟನಾಗಿದ್ದಾನೆ. ಭಗವಂತನು ಕಲ್ಯಾಣಗುಣಾಕರನೂ ಹೇಯಪ್ರತ್ಯನೀಕನೂ ಆಗಿದ್ದಾನೆ. 'ನ ಸ್ಥಾನತೋಽಪಿ ಪರಸ್ಯ ಉಭಯಲಿಂಗಂ ಸರ್ವತ್ರ ಹಿ' ಎಂದು ಸೂತ್ರಕಾರರು ಇದನ್ನು ಹೇಳಿದ್ದಾರೆ. ಅವನು ಹಾಗೆಯೇ ಪರಮ ಸುಲಭನೂ ಆಗಿದ್ದಾನೆ. 'ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ' ಎಂದು ತನ್ನನ್ನು ಆಶ್ರಯಿಸುವ ವಿಚಾರದಲ್ಲಿ ತಾನು ಸರ್ವರಿಗೂ ಸಮನಾಗಿದ್ದೇನೆಂದು ತಾನೇ ಹೇಳಿಕೊಂಡಿದ್ದಾನೆ. ಹೀಗೆ ಈ ಶ್ಲೋಕದಲ್ಲಿ ಭಗವಂತನ ಪತಿತಪಾವನತ್ವವನ್ನು ಸ್ತುತಿಸಿ ಅವನ ದಿವ್ಯಾನುಭವವನ್ನು ತಮಗೂ ಕರುಣಿಸಿ ಕಾಪಾಡಬೇಕೆಂದು ಬೇಡಿದ್ದಾರೆ.

**ಸತ್ವಾನಿ ನಾಥ ವಿವಿಧಾನ್ಯಭಿಸಂಜಿಘೃಕ್ಷೋಃ**
**ಸಂಸಾರನಾಟ್ಯರಸಿಕಸ್ಯ ತವಾಸ್ತು ತೃಪ್ತ್ಯೈ ।**
**ಪ್ರತ್ಯಕ್ಪರಾಙ್ಮುಖಮತೇರಸಮೀಕ್ಷ್ಯಕರ್ತುಃ**
**ಪ್ರಾಚೀನಸಜ್ಜನವಿಡಮ್ಬನಭೂಮಿಕಾ ಮೇ ॥೪೩॥**

(ನಾಥ) ಎಲೈ ಪ್ರಭುವೇ, (ಪ್ರತ್ಯಕ್ಪರಾಙ್ಮುಖಮತೇಃ) ಆತ್ಮಚಿಂತನೆಯ ವಿಷಯದಲ್ಲಿ ವಿಮುಖವಾದ ಬುದ್ಧಿಯುಳ್ಳವನೂ, (ಅಸಮೀಕ್ಷ್ಯಕರ್ತುಃ) ಯುಕ್ತಾಯುಕ್ತ ವಿಮರ್ಶೆಯಿಲ್ಲದೆ ಕೆಲಸಮಾಡುವವನೂ ಆದ, (ಮೇ) ನನ್ನ, (ಪ್ರಾಚೀನ ಸಜ್ಜನ ವಿಡಂಬನ ಭೂಮಿಕಾ) ಪುರಾತನ ಸಂತರಂತೆ ನಟಿಸುವ ಈ ವೇಷವು, (ವಿವಿಧಾನಿ ಸತ್ವಾನಿ) ವಿವಿಧವಾದ ಪ್ರಾಣಿಗಳನ್ನು, (ಅಭಿಸಂಜಿಘೃಕ್ಷೋಃ) ಎಲ್ಲ ಕಡೆಯಿಂದ ಸಂಗ್ರಹಿಸಲಿಚ್ಛೆಯುಳ್ಳವನೂ, (ಸಂಸಾರ ನಾಟ್ಯ ರಸಿಕಸ್ಯ) ಸಂಸಾರವೆಂಬ ನಾಟಕವನ್ನು ಆಡುವುದರಲ್ಲಿ ರಸಿಕನೂ ಆದ, (ತವ) ನಿನಗೆ, (ತೃಪ್ತ್ಯೈ ಅಸ್ತು) ಸಂತೋಷವನ್ನುಂಟುಮಾಡುವುದಾಗಲಿ.

ಈ ಶ್ಲೋಕದಲ್ಲಿ ನಮ್ಮ ತಪ್ಪುಗಳೂ ಭಗವಂತನಿಗೆ ಲೀಲಾರಸವನ್ನುಂಟುಮಾಡುವುದೆಂದು ತಿಳಿಸುತ್ತಾರೆ. ನಾವು ಮಾಡುವ ಭಕ್ತಿ, ಆಡುವ

ಮಾತು, ನಡೆಯುವ ವ್ಯವಹಾರ ಇವು ಬಹುತೇಕವಾಗಿ ಡಾಂಭಿಕವಾಗಿರುವುದುಂಟು. ಭಕ್ತರ ವೇಷವನ್ನು ನಾವು ಹೇಗೆ ತೊಡುತ್ತೇವೆಂದರೆ ನೈಜ ಭಕ್ತರೂ ಹಾಗೆ ವ್ಯವಹರಿಸಲಾರರು. ಇದು ನಟನೆಯೇ ಆದರೂ ಭಗವಂತನಿಗೆ ಸಂತೋಷವನ್ನುಂಟುಮಾಡುವುದು. ಎಷ್ಟು ಚೆನ್ನಾಗಿ ಇವರು ನಟನೆ ಮಾಡುತ್ತಾರೆಂದು ಅವನು ಸಂತೋಷಿಸುತ್ತಾನೆ. ಹಾಗೂ ತನ್ನ ಕೃಪೆಯನ್ನು ತೋರಿ ಹಾರ್ದವಾದ ಭಕ್ತಿಯನ್ನುಂಟುಮಾಡುತ್ತಾನೆ. ನಟನೆ ಮಾಡುವಾಗ ಸಜ್ಜನರ ವೇಷವನ್ನು ತೊಡುವುದೂ ಶುಭೋದರ್ಕವೇ. ಮೊದ ಮೊದಲು ನಟನೆಯಾಗಿದ್ದು ವೇಷವಾಗಿದ್ದು ಕೊನೆಯಲ್ಲಿ ಅದು ತೀವ್ರವಾದ ಭಕ್ತಿಯಾಗಿ ಪರಿಣಾಮಗೊಳ್ಳುವುದು. ಭಗವಂತನು ಎಲ್ಲ ಕಡೆಯಿಂದಲೂ ಭಕ್ತರನ್ನು ಆದರಿಸಿ ಸಂಗ್ರಹಿಸಲು ಕಾತುರನಾಗಿದ್ದಾನೆ. ಭಕ್ತನ ವೇಷ ತೊಟ್ಟಿದ್ದರೂ ಸರಿ ಅಂಥವನ ಮೇಲೆ ಕೃಪಾವರ್ಷ ಮಾಡುತ್ತಾನೆ.

**ಕರ್ತವ್ಯಮಿತ್ಯನುಕಲಂ ಕಲಯಾಮ್ಯಕೃತ್ಯಂ**
**ಸ್ವಾಮಿನ್ನಕೃತ್ಯಮಿತಿ ಕೃತ್ಯಮಪಿ ತ್ಯಜಾಮಿ ।**
**ಅನ್ಯದ್ವ್ಯತಿಕ್ರಮಣಜಾತಮನನ್ತಮರ್ಥ-**
**ಸ್ಥಾನೇ ದಯಾ ಭವತು ತೇ ಮಯಿ ಸಾರ್ವಭೌಮಾ ॥೪೪॥**

(ಸ್ವಾಮಿನ್) ಒಡೆಯನೇ, (ಕರ್ತವ್ಯಮಿತಿ) ಮಾಡಬೇಕಾದ ಕೆಲಸವೆಂದು, (ಅಕೃತ್ಯಂ) ಮಾಡಬಾರದುದನ್ನು, (ಅನುಕಲಂ) ಮತ್ತೆ ಮತ್ತೆ (ಕಲಯಾಮಿ) ಮಾಡುತ್ತೇನೆ. (ಕೃತ್ಯಮಪಿ) ಮಾಡಬೇಕಾದುದನ್ನು (ಅಕೃತ್ಯಮಿತಿ) ಮಾಡತಕ್ಕುದಲ್ಲವೆಂದು, (ತ್ಯಜಾಮಿ) ಬಿಡುತ್ತಿದ್ದೇನೆ. (ಅನ್ಯದ್ವ್ಯತಿಕ್ರಮಣಜಾತಂ) ಇತರ ಉಲ್ಲಂಘನೆಗಳ ಸಮೂಹವಾದರೋ, (ಅನಂತಂ) ಅಪಾರವಾಗಿದೆ. (ಮಯಿ) ನನ್ನಲ್ಲಿ, (ಸಾರ್ವಭೌಮಿ) ಪರಮ ಪ್ರಭುತ್ವವನ್ನು ಹೊಂದಿರುವ, (ತೇ ದಯಾ) ನಿನ್ನ ಕರುಣೆಯು, (ಅರ್ಥಸ್ಥಾನೇ ಭವತು) ಉಪಾಯ ಸ್ಥಾನದಲ್ಲಿ ನಿಲ್ಲುವಂತಾಗಲಿ.

ನಮ್ಮ ಕಾರ್ಪಣ್ಯಾದಿಗಳನ್ನು ನೆನೆದುಕೊಂಡರೆ ಭಗವಂತನ ದಯೆಯನ್ನುಳಿದು ಬೇರೆ ಉತ್ತಾರಕವಾದುದಿಲ್ಲವೆಂದು ಗೊತ್ತಾಗುತ್ತದೆ.

ವಿಹಿತಸ್ಯ ಅನನುಷ್ಠಾನಾತ್ ನಿಂದಿತಸ್ಯ ನಿಷೇವಣಾತ್ ।
ಅನಿಗ್ರಹಾಚ್ಚೇಂದ್ರಿಯಾಣಾಂ ನರಃ ಪತನಮೃಚ್ಛತಿ ॥

ಎಂದು ಹೇಳಿದಂತೆ ನಾವು ಭಗವದಾಜ್ಞೆಯನ್ನು ಉಲ್ಲಂಘಿಸುತ್ತಿರುವುದೇ ನಮ್ಮ ಪತನಕ್ಕೆ ಕಾರಣವಾಗಿದೆ. ನಮ್ಮ ಅಪರಾಧಗಣವಾದರೋ ಅನುಭವಿಸಿ ಮುಗಿಸಲಸಾಧ್ಯವಾದುದು. 'ಅನುಭವಿತುಮಘೌಘಂ ನಾಲಮಾಗಾಮಿ ಕಾಲಃ'. ಬೇರೆ ಪ್ರಾಯಶ್ಚಿತ್ತಾದಿಗಳಿಂದ ಅವನ್ನು ನಾಶಪಡಿಸುವುದೂ ಅಸಾಧ್ಯ. ಭಗವಂತನ ದಯೆಯೇ ನಮ್ಮನ್ನು ಕಾಪಾಡಬೇಕು. ನಮ್ಮ ಮೇಲಿನ ಕರುಣೆಯಿಂದ ನಮ್ಮ ಪಾಪಗಳನ್ನೆಲ್ಲಾ ಕಳೆದು ಭಗವಂತನು ನಮ್ಮನ್ನು ಶುದ್ಧರನ್ನಾಗಿಸಿ ತನ್ನ ನಿತ್ಯಸಂಶ್ಲೇಷವನ್ನು ನೀಡಿ ಸಲಹುತ್ತಾನೆ. ಆದುದರಿಂದ ಭಗವದ್ದಯೆಯನ್ನೇ ಉಪಾಯವಾಗಬೇಕೆಂದು ಬೇಡಲಾಗಿದೆ.

ದುರಾಚಾರೋऽಪಿ ಸರ್ವಾಶೀ ಕೃತಘ್ನೋ ನಾಸ್ತಿಕಃ ಪುರಾ ।
ಸಮಾಶ್ರಯೇದಾದಿದೇವಂ ಶ್ರದ್ಧಯಾ ಶರಣಂ ಯದಿ ॥

ನಿರ್ದೋಷಂ ವಿದ್ಧಿ ತಂ ಜಂತುಂ ಪ್ರಭಾವಾತ್ ಪರಮಾತ್ಮನಃ ।
ಎಂದಂತೆ ಭಗವಂತನ ದಯೆಯ ಪ್ರಭಾವದಿಂದ ನಮ್ಮ ಸಕಲ ಪಾಪಗಳೂ ಪರಿಹಾರವಾಗುತ್ತವೆ.

**ಯಂ ಪೂರ್ವಮಾಶ್ರಿತಜನೇಷು ಭವಾನ್ಯಥಾವ-**
**ದ್ಧರ್ಮಂ ಪರಂ ಪ್ರಣಿಜಗೌ ಸ್ವಯಮಾನೃಶಂಸ್ಯಮ್ ।**
**ಸಂಸ್ಮಾರಿತಸ್ತ್ವಮಸಿ ತಸ್ಯ ಶರಣ್ಯಭಾವಾ-**
**ನ್ನಾಥ ತ್ವದಾತ್ತಸಮಯಾ ನನು ಮಾದೃಶಾರ್ಥಮ್ ॥೫೫॥**

(ನಾಥ) ಒಡೆಯನೆ, (ಪೂರ್ವ) ಹಿಂದೆ ನಿನ್ನ ಅವತಾರ ಕಾಲದಲ್ಲಿ (ಭವಾನ್) ನೀನು (ಆಶ್ರಿತಜನೇಷು) ನಿನ್ನನ್ನಾಶ್ರಯಿಸಿದವರಲ್ಲಿ (ಯಥಾವತ್) ಹೇಗೆ (ಆನೃಶಂಸ್ಯಂ) ಕರುಣೆಯನ್ನು (ಪರಂಧರ್ಮಂ) ಪರಮ ಧರ್ಮವೆಂದು, (ಸ್ವಯಂ) ನೀನೆ, (ಪ್ರಣಿಜಗೌ) ಉದ್ಘೋಷಿಸಿದೆಯೋ, (ಶರಣ್ಯಭಾವಾತ್) ಹಾಗೆ ನೀನು ರಕ್ಷಕನಾಗಿರುವುದರಿಂದ, (ತಸ್ಯ ಸಂಸ್ಮಾರಿತಂ ಅಸಿ), ಆದನ್ನು ನಿನ್ನ ನೆನಪಿಗೆ ತರುತ್ತಿದ್ದೇನೆ. (ತ್ವದಾತ್ತಸಮಯಾ) ನೀನು

ಕೈಗೊಂಡ ಪ್ರತಿಜ್ಞೆಯು, (ಮಾದೃಶಾರ್ಥಮ್ ಸನು) ನಮ್ಮಂಥವರಿಗಾಗಿಯೇ ಅಲ್ಲವೆ ?

ಭಗವಂತನಲ್ಲಿ ನಾವು ಶರಣಾಗತಿ ಮಾಡಿದಮೇಲೆ ಅದು ಹೇಗಿದ್ದರೂ ನಮ್ಮ ರಕ್ಷಣೆ ಅವನದೇ ಎಂದು ತಿಳಿಸುತ್ತಿದ್ದಾರೆ.

ಸರ್ವಸ್ಮಾತ್ಪರನಾದ ಭಗವಂತನು ಶ್ರೀರಾಮನಾಗಿ ಅವತರಿಸಿ 'ಆತ್ಮಾನಂ ಮಾನುಷಂ ಮನ್ಯೇ' ಎಂದು ಮನುಷ್ಯ ಭಾವದಿಂದ ವರ್ತಿಸಿ ಪರಮಧರ್ಮವನ್ನು ಉಪದೇಶಿಸಿದನು. ರಾಮಾವತಾರದಲ್ಲಿ ತನ್ನ ಪರಮ ಸೌಲಭ್ಯವನ್ನು ಪ್ರದರ್ಶಿಸಿ ತಾನು ಶರಣಾಗತಸಂತ್ರಾಣದೀಕ್ಷಿತನೆಂಬುದನ್ನು ತೋರಿಸಿಕೊಟ್ಟನು. ವಿಭೀಷಣ ಪರಿಗ್ರಹದ ಸಮಯದಲ್ಲಿ ಶರಣಾಗತಿಯ ಮಹತ್ವವನ್ನು ತಾನೇ ವಿವರಿಸಿದನು.

ಆರ್ತೋ ವಾ ಯದಿ ವಾ ದೃಪ್ತಃ ಪರೇಷಾಂ ಶರಣಾಗತಃ ।
ಅಪಿ ಪ್ರಾಣಾನ್ ಪರಿತ್ಯಜ್ಯ ರಕ್ಷಿತವ್ಯಃ ಕೃತಾತ್ಮನಾ ॥
ಬದ್ಧಾಂಜಲಿಪುಟಂ ದೀನಂ ಯಾಚಂತಂ ಶರಣಾಗತಂ ।
ನಹನ್ಯಾದಾನೃಶಂಸ್ಯಾರ್ಥಮಪಿ ಶತ್ರುಂ ಪರಂತಪ ॥

ಎಂದು ಕಾರುಣ್ಯದ ಮಹತ್ವವನ್ನು ತೋರಿಸಿಕೊಟ್ಟನು. ಈ ದಯಾ ಪ್ರದಾನದಲ್ಲಿ ದೇವಿಯು ಪರಮಾತ್ಮನಿಗೆ ಕಡಿಮೆಯಿಲ್ಲ.

ಪಾಪಾನಾಂ ವಾ ಶುಭಾನಾಂ ವಾ ವಧಾರ್ಹಾಣಾಂ ಪ್ಲವಂಗಮ ।
ಕಾರ್ಯಂ ಕರುಣಮಾರ್ಯೇಣ ನಕಶ್ಚಿನ್ನಾಪರಾಧ್ಯತಿ ॥

ಎಂದು ತಿಳಿಸಿ ಆದ್ರಾಪರಾಧರಾದ ರಾಕ್ಷಸಿಯರನ್ನು ಕಾಪಾಡಿದಳು ಕರುಣಾಮೂರ್ತಿಯಾದ ದೇವಿ.

ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ ।
ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ ॥

ಎಂದೂ.

ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ।

ಎಂದೂ ಪ್ರತಿಜ್ಞೆಮಾಡಿರುವುದು ನಮ್ಮಂತಹ ಅಪರಾಧಸಹಸ್ರ ಭಾಜನರೂ, ಅಕಿಂಚನರೂ, ಬೇರೆ ಗತಿಯಿಲ್ಲದವರೂ ಆದವರ ರಕ್ಷಣೆಗೆ ತಾನೆ? ಹೀಗೆ ಆಚಾರ್ಯರು ಈ ಶ್ಲೋಕದಲ್ಲಿ ಭಗವದ್ದಯೆಗೆ ನಾವು ಉತ್ತಮ

ಪಾತ್ರವೆಂಬುದನ್ನು ಅವನಲ್ಲಿ ನಿವೇದಿಸುತ್ತಾರೆ. ಪರಮಾಚಾರ್ಯರ 'ಅನುತ್ತಮಂ ಪಾತ್ರಂ ಇದಂ ದಯಾಯಾಃ' ಎಂಬುದು ಇಲ್ಲಿ ಅನುಸಂಧಾನ ಮಾಡಬೇಕಾದದು.

ತ್ರಾಣಂ ಭವೇತಿ ಸಕೃದುಕ್ತಿಸಮುದ್ಯತಾನಾಂ
ತೈಸ್ತೈರಸಹ್ಯವೃಜಿನೈರುದರಂಭರಿಸ್ತೇ ।
ಸತ್ಯಾಪಿತಾ ಶತಮುಖಾತ್ಮಜಶಂಕರಾದೌ
ನಾಥ ಕ್ಷಮಾ ನ ಖಲು ಜನ್ತುಷು ಮದ್ವಿವರ್ಜಮ್ ॥೫೬॥

(ತ್ರಾಣಂಭವ ಇತಿ) ನನಗೆ ರಕ್ಷಕನಾಗು ಎಂದು (ಸಕೃದುಕ್ತಿಸಮುದ್ಯತಾನಾಂ) ಒಂದುಸಲಮಾತ್ರ ಶರಣಾಗತಿವಚನವನ್ನು ಹೇಳಲು ಪ್ರಯತ್ನ ಮಾಡಿದವರ (ತೈಃತೈಃ) ಆಯಾ (ಅಸಹ್ಯವೃಜಿನೈಃ) ಸಹಿಸಲಾರದ ಕಠೋರ ಪಾಪಗಳಿಂದ (ಉದರಂಭರಿ) ಹೊಟ್ಟೆಯನ್ನು ತುಂಬಿಸಿಕೊಳ್ಳುವುದೂ (ಶತಮುಖಾತ್ಮಜ ಶಂಕರಾದೌ) ಕಾಕಾಸುರ ರುದ್ರ ಮುಂತಾದವರಲ್ಲಿ (ಪ್ರತ್ಯರ್ಪಿತಾ) ತನ್ನ ಸತ್ಯತ್ವವನ್ನು ಸ್ಥಾಪಿಸಿದುದೂ ಆದ (ಜಂತುಷು) ಪ್ರಾಣಿಗಳಲ್ಲಿರುವ (ತೇ) ನಿನ್ನ (ಕ್ಷಮಾ) ದಯೆಯು (ಮದ್ವಿವರ್ಜಮ್ ನ ಖಲು) ನನ್ನನ್ನು ಬಿಟ್ಟುದಲ್ಲವಷ್ಟೆ ?

ಭಗವಂತನ ದಯೆಗೆ ನಾವು ಪಾತ್ರರಾಗಿರುವೆವೆಂದು ಈ ಶ್ಲೋಕದಲ್ಲಿ ಆಚಾರ್ಯರು ವಿನಮ್ರರಾಗಿ ಭಗವಂತನಲ್ಲಿ ಅರಿಕೆಮಾಡಿದ್ದಾರೆ. ನಮ್ಮನ್ನು ಕಾಪಾಡಬೇಕೆಂದು ಅವನಲ್ಲಿ ಒಮ್ಮೆ ಬೇಡಿದರೂ ಸಾಕು. ಅವನು ನಮ್ಮ ಪಾಪಗಳನ್ನೆಲ್ಲಾ ದೂರಮಾಡುವನು ಮತ್ತು ತನ್ನ ರಕ್ಷಣೆಯನ್ನು ನಮಗೊದಗಿಸುವನು. ಹಾಗೆ ನಮ್ಮನ್ನು ರಕ್ಷಿಸದಿದ್ದರೆ ಆಶ್ರಿತ ಸಂರಕ್ಷಕನೆಂಬ ಅವನ ಬಿರುದಿಗೇ ಅಪಾಯವೆಂದು ಸೂಚಿಸಿದ್ದಾರೆ. 'ಮದೇಕ ವರ್ಜಂ ಕಿಮಿದಂ ವ್ರತಂ ತೆ' ಎಂಬ ಆಚಾರ್ಯ ಯಾಮುನರ ಉಕ್ತಿಯನ್ನು ಇದು ನೆನಪಿಗೆ ತರುತ್ತದೆ. 'ವಿಭೀಷಣೋ ವಾ ಸುಗ್ರಿವ ಯದಿ ವಾ ರಾವಣ ಸ್ವಯಂ। ಆನಯೈನಂ ಹರಿಶ್ರೇಷ್ಠ ದತ್ತಮಸ್ಯಾಭಯಂ ಮಯಾ' ಎಂದು ನೀನು ಮಾಡಿದ ಪ್ರತಿಜ್ಞೆಗೆ ನಾನೂ ವಿಷಯವಾಗುತ್ತೇನೆಂಬ ಭಾವ ಸರ್ವಸಾಧಾರಣವಾದುದು

ನಿನ್ನ ಸ್ವಾಮಿತ್ವ ಹಾಗೂ ಶರಣ್ಯತ್ವ. 'ರಾಮೋ ದ್ವಿರ್ನಾಭಿಭಾಷತೇ' ಎಂದೂ ನೀನೇ ಹೇಳಿರುವೆ. ಆದುದರಿಂದ ನಿನ್ನ ಪ್ರತಿಜ್ಞೆಗೆ ಭಂಗ ಬರದೇ ಇರುವುದಕ್ಕಾಗಿ ನನ್ನಮೇಲೆ ಅನುಕಂಪೆಯನ್ನು ತೋರಿಸಲೇಬೇಕು ಎಂಬ ಭಾವ.

ಕರ್ಮ ಜ್ಞಾನಾದಿಗಳಲ್ಲಿ ಪ್ರವರ್ತಿಸದಿದ್ದರೂ ನಿನ್ನ ದೇಶದಲ್ಲಿ ವಾಸ ಮಾಡುತ್ತಿರುವುದನ್ನೇ ಎಣಿಸಿ ಕಾಪಾಡಬೇಕೆಂದು ಬೇಡುತ್ತಾರೆ.

ಕರ್ಮಾದಿಷು ತ್ರಿಷು ಕಥಾಂ ಕಥಮಪ್ಯಜಾನ-
ನ್ಕಾಮಾದಿಮೇದುರತಯಾ ಕಲುಷಪ್ರವೃತ್ತಿಃ ।
ಸಾಕೇತಸಂಭವಚರಾಚರಜನ್ತುನೀತ್ಯಾ
ವೀಕ್ಷ್ಯಃ ಪ್ರಭೋ ವಿಷಯವಾಸಿತಯಾಽಪ್ಯಹಂ ತೇ ॥೪೭॥

(ಪ್ರಭೋ) ಎಲೈ ಪ್ರಭುವೇ, (ಕರ್ಮಾದಿಷು) ಕರ್ಮ, ಜ್ಞಾನ, ಭಕ್ತಿಗಳೇ ಮೊದಲಾದ, (ತ್ರಿಷು) ಮೂರರಲ್ಲಿಯೂ, (ಕಥಾಂ) ಅವುಗಳ ಸ್ವರೂಪಾದಿಗಳನ್ನು, (ಕಥಮಪಿ) ಹೇಗೂ, (ಅಜಾನನ್) ತಿಳಿಯದವನಾಗಿ, (ಕಾಮಾದಿಮೇದುರತಯಾ) ಕಾಮವೇ ಮೊದಲಾದುವುಗಳಿಂದ ಸಂಬಂಧಿಸಿದ ಕಾರಣ, (ಕಲುಷಪ್ರವೃತ್ತಿಃ) ಪಾಪದಲ್ಲಿ ತೊಡಗುವನಾದರೂ, (ಸಾಕೇತಸಂಭವ ಚರಾಚರ ಜಂತು ನೀತ್ಯಾ) ಸಾಕೇತ ಜನಪದದಲ್ಲಿನ ಚರಾಚರ ವಸ್ತುಗಳಿಗೆಲ್ಲ ಮೋಕ್ಷವನ್ನು ಕೊಟ್ಟ ರೀತಿಯಲ್ಲಿ, (ಅಹಮಪಿ) ನಾನೂ, (ತೇ) ನಿನ್ನ, (ವಿಷಯವಾಸಿತಯಾ) ದೇಶದಲ್ಲಿ ವಾಸಮಾಡುವವನೆಂದು, (ವೀಕ್ಷ್ಯಃ) ನೋಡಲ್ಪಡಬೇಕು,

ಈ ಶ್ಲೋಕದಲ್ಲಿ ಭಗವದ್ದೇಶವಾಸತ್ವದ ಮಹತ್ವವನ್ನು ಹೇಳಿದೆ. ನಾವು ಕರ್ಮ, ಜ್ಞಾನ, ಭಕ್ತಿಗಳಲ್ಲಿ ನಿಷ್ಕೃಷ್ಟವಾದ ಜ್ಞಾನವನ್ನು ಪಡೆದಿಲ್ಲ. ಅವುಗಳನ್ನು ತಕ್ಕ ರೀತಿಯಲ್ಲಿ ಅನುಷ್ಠಿಸಲೂ ಅಸಮರ್ಥರಾಗಿದ್ದೇವೆ. ಕಾಮಕ್ರೋಧಗಳಿಗೆ ವಶರಾಗಿ ಪಾಪವನ್ನಾಚರಿಸುತ್ತಲೂ ಇದ್ದೇವೆ. ಇಂತಹ ನಮಗೆ ಭಗವಂತನ ನಿರ್ಹೇತುಕವಾದ ಕೃಪೆಯೇ ಉತ್ತಾರಕ.

ತೇ ವಯಂ ಭವತಾ ರಕ್ಷ್ಯಾಃ ಭವದ್ವಿಷಯವಾಸಿನಃ
ನಗರಸ್ಥೋ ವನಸ್ಥೋ ವಾ ತ್ವಂ ನೋ ರಾಜಾ ಜನೇಶ್ವರ ॥

ಎಂದಂತೆ ನಾವು ಭಗವಂತನ ದಿವ್ಯದೇಶದಲ್ಲಿ ವಾಸವಾಗಿರುವುದರಿಂದಲೇ ನಮ್ಮ ರಕ್ಷಣೆ ಆಗಬೇಕು. ಶ್ರೀರಾಮಚಂದ್ರನು ಸಾಕೇತ (ಅಯೋಧ್ಯಾ) ನಗರದಲ್ಲಿದ್ದ ಚರಾಚರ ಜಂತುಗಳಿಗೆಲ್ಲ ಮೋಕ್ಷವನ್ನಿತ್ತವನಲ್ಲವೇ? ಹಾಗಿರಲು ಆ ಪ್ರಾಪ್ತಿ ನಮಗೆ ಒದಗಬೇಡವೇ? ತಿಳಿದೋ ತಿಳಿಯದೆಯೋ ಭಗವದ್ವಿಷಯವಾಸಾದಿಗಳನ್ನು ಮಾಡಿದರೆ ಅದು ಯಾವುದಾದರೊಂದು ರೀತಿಯಲ್ಲಿ ಉಪಾಯಾನುಷ್ಠಾನ ಮಾಡುವಂತೆ ಮಾಡಿ ಉಪಾಯ ಪೂರ್ತಿಯನ್ನುಂಟುಮಾಡುತ್ತದೆ.

'ಸಾಕೇತ ಜನಪದಜನಿಧನಿಕ ಜಂಗಮ ತದಿತರ ಜಂತು ಜಾತ ದಿವ್ಯಗತಿದಾನದರ್ಶಿತ ನಿತ್ಯ ನಿಸ್ಸೀಮ ವೈಭವ' ಎಂದು ಆಚಾರ್ಯರು 'ರಘುವೀರ ಗದ್ಯ'ದಲ್ಲಿ ಕೊಂಡಾಡಿದ್ದಾರೆ. 'ವಿಷಯವಾಸಿತಯಾಪಿ' ಎಂದು ಹೇಳಿರುವುದರಿಂದ ಮತ್ತಾವ ಯೋಗ್ಯತೆ ಇಲ್ಲದಿದ್ದರೂ ನಿನ್ನ ದೇಶದಲ್ಲಿರುವುದರಿಂದಲೇ ನೀನು ರಕ್ಷಿಸಬೇಕು ಎಂಬುದು ಅಭಿಪ್ರಾಯ.

**ಬ್ರಹ್ಮಾಂಡ ಲಕ್ಷಶತಕೋಟಿಗಣಾನನನ್ತಾ-**
**ನೇಕಕ್ಷಣೇ ವಿಪರಿವರ್ತ್ಯ ವಿಲಜ್ಜಮಾನಾಮ್ ।**
**ಮತ್ಪಾಪರಾಶಿಮಥನೇ ಮಧುದರ್ಪಹನ್ತ್ರೀಂ**
**ಶಕ್ತಿಂ ನಿಯುಙ್ಕ್ಷ್ವ ಶರಣಾಗತವತ್ಸಲ ತ್ವಮ್ ॥೫೮॥**

(ಶರಣಾಗತವತ್ಸಲ) ಮರೆಹೊಕ್ಕವರ ದೋಷಗಳನ್ನು ಎಣಿಸದ ವತ್ಸಲನೇ, (ಅನಂತಾನ್) ಲೆಕ್ಕಕ್ಕೆ ಸಿಗದ, (ಬ್ರಹ್ಮಾಂಡಲಕ್ಷ ಶತಕೋಟಿಗಣಾನ್) ಬ್ರಹ್ಮಾಂಡಗಳ ಲಕ್ಷ ಶತಕೋಟಿಗಳ ಸಮೂಹಗಳನ್ನು, (ಏಕಕ್ಷಣೇ) ಒಂದೇ ಕ್ಷಣದಲ್ಲಿ, (ವಿಪರಿವರ್ತ್ಯ) ಪರಿವರ್ತನಗೊಳಿಸಿ, (ವಿಲಜ್ಜಮಾನಾಮ್) ನಾಚಿಕೆಗೊಳ್ಳುವುದೂ, (ಮಧುದರ್ಪ ಹನ್ತ್ರೀಂ) ಮಧುವೆಂಬ ರಕ್ಕಸನ ಸೊಕ್ಕನ್ನು ನಾಶಗೊಳಿಸಿದುದೂ ಆದ (ಶಕ್ತಿಂ) ನಿನ್ನ ಶಕ್ತಿಯನ್ನು, (ತ್ವಮ್) ನೀನು, (ಮತ್ಪಾಪರಾಶಿ ಮಥನೇ) ನನ್ನ ಪಾಪದ ರಾಶಿಯನ್ನು ಧ್ವಂಸ ಮಾಡುವುದರಲ್ಲಿ (ನಿಯುಙ್ಕ್ಷ್ವ) ನಿಯಮಿಸು.

ಭಗವಂತನ ರಾಜ್ಯದಲ್ಲಿ ನಾವು ವಾಸಿಸುವರಾದ ಕಾರಣ ನಮ್ಮ ರಕ್ಷಣೆಯನ್ನು ಆತನೇ ಮಾಡಬೇಕೆಂದು ಹಿಂದಿನ ಶ್ಲೋಕದಲ್ಲಿ ತಿಳಿಸಿದರು. ಈ ಶ್ಲೋಕದಲ್ಲಿ ಭಗವಂತನನ್ನು ಸೇರಲು ಅಡ್ಡಿಯಾಗಿರುವ ನಮ್ಮ ಪಾಪವನ್ನೂ ಅವನೇ ನಾಶಗೊಳಿಸಬೇಕೆಂದು ಬೇಡಿದೆ. ಭಗವಂತನ ಶಕ್ತಿ ಅಪಾರವಾದುದು. ಒಂದೇ ಕ್ಷಣದಲ್ಲಿ ಅಸಂಖ್ಯವಾದ ಬ್ರಹ್ಮಾಂಡಗಳನ್ನು ಸೃಜಿಸಿಯೂ ಅಳಿಸಿಯೂ ಹಾಕಬಲ್ಲದು ಅದು. ಇಂಥ ಕೆಲಸಮಾಡುವುದೂ ಭಗವಂತನ ಶಕ್ತಿಗೆ ಅತ್ಯಲ್ಪ ವಿಚಾರ. ಆದುದರಿಂದಲೇ ಅದು ಲಜ್ಜೆಗೊಳಗಾಗುತ್ತದೆ. ಭಗವಂತನ ಶಕ್ತಿಗೆ ತಕ್ಕ ಕೆಲಸವೆಂದರೆ ನಮ್ಮ ಪಾಪರಾಶಿಯ ಮರ್ದನ. ನಮ್ಮ ಪಾಪರಾಶಿ ಅಷ್ಟು ಅಪಾರವಾದುದು; ಇತರರಿಂದ ನಾಶಪಡಿಸಲಸಾಧ್ಯವಾದುದು. ಅವನನ್ನು ಸೇರಲು ಅಡ್ಡಿಯಾಗಿ ನಿಂತಿರುವ ನಮ್ಮ ಪಾಪದ ಹೊರೆಯನ್ನು ನಾಶಗೊಳಿಸಿ ನಮ್ಮನ್ನು ಶುದ್ಧರನ್ನಾಗಿಮಾಡಿ ತನ್ನೆಡೆಗೆ ಕರೆದುಕೊಳ್ಳ ಬೇಕೆಂದು ಅವನಲ್ಲಿ ಬೇಡಲಾಗಿದೆ. ಶರಣಾಗತರಲ್ಲಿ ವತ್ಸಲನಾದ ಪ್ರಭುವಿನಲ್ಲಿ ಈ ಪ್ರಾರ್ಥನೆ ಸಫಲವಾಗಿದೆ.

**ಆಸ್ತಾಂ ಪ್ರಪತ್ತಿರಿಹ ದೇಶಿಕಸಾಕ್ಷಿಕಾ ಮೇ**
**ಸಿದ್ಧಾ ತದುಕ್ತಿರನಘಾ ತ್ವದಪೇಕ್ಷಿತಾರ್ಥಾ ।**
**ನ್ಯಸ್ತಸ್ಯ ಪೂರ್ವನಿಪುಣೈಸ್ತ್ವಯಿ ನನ್ವಿದಾನೀಂ**
**ಪೂರ್ಣೇ ಮುಕುನ್ದ ಪುನರುಕ್ತ ಉಪಾಯ ಏಷಃ ॥೪೯॥**

(ದೇಶಿಕ ಸಾಕ್ಷಿಕಾ) ಆಚಾರ್ಯರ ಸಮ್ಮುಖದಲ್ಲಿ ಆದ, (ಮೇ) ನನ್ನ, (ಪ್ರಪತ್ತಿಃ) ಈ ಶರಣಾಗತಿಯು, (ಇಹ ಆಸ್ತಾಂ) ಹಾಗಿರಲಿ, (ತ್ವದಪೇಕ್ಷಿ ತಾರ್ಥಾ) ನಿನ್ನಿಂದ ಅಪೇಕ್ಷಿತವಾದ ಅರ್ಥವುಳ್ಳುದೂ, (ಅನಘಾ) ದೋಷ ರಹಿತವಾದುದೂ ಆದ, (ತದುಕ್ತಿಃ) ಆ ಶರಣಾಗತಿವಚನವು, (ಸಿದ್ಧಾ) ಸಿದ್ಧ ವಾಗಿ ಹೋಗಿದೆ. (ಪೂರ್ವನಿಪುಣೈಃ) ನಮ್ಮ ಪ್ರಾಚೀನಾಚಾರ್ಯರುಗಳಿಂದ, (ಪೂರ್ಣೇತ್ವಯಿ) ಪರಿಪೂರ್ಣವಾದ ನಿನ್ನಲ್ಲಿ, (ನ್ಯಸ್ತಸ್ಯ) ಒಪ್ಪಿಸಲ್ಪಟ್ಟ ನನ್ನ ವಿಚಾರದಲ್ಲಿ, (ಏಷಃ ಉಪಾಯಃ) ಈಗ ಮಾಡಿದ ಪ್ರಪತ್ತ್ಯುಪಾಯವು, (ಮುಕುಂದ) ಎಲೈ ಮುಕುಂದನೇ, (ಪುನರುಕ್ತಃ) ಮತ್ತೊಮ್ಮೆ ಉಚ್ಚರಿಸ ಲಾಗಿದೆ.

ಈ ಶ್ಲೋಕವಲ್ಲಿ ನಮ್ಮ ರಕ್ಷಣೆ ಭಗವಂತನಿಗೇ ಸೇರಿದುದೆಂದೂ ನಾವು ಅವನ ವಸ್ತುವೇ ಆದ ಕಾರಣ ನಮ್ಮದೆಂಬುದನ್ನು ಅವನಿಗೆ ಸಮರ್ಪಿಸು ತ್ತಿದ್ದೇವೆ ಎಂಬ ಅಭಿಮಾನ ಸಲ್ಲದೆಂದೂ ಸೂಚಿಸುತ್ತಾರೆ. 'ಮಮನಾಥ ಯದಸ್ತಿಯೋಽಸ್ಮ್ಯಹಂ ಸಕಲಂ ತದ್ಧಿ ತವೈವ ಮಾಧವ' ಎಂದು ಯಾಮು ನರು ಅನುಭವಿಸಿರುವುದನ್ನು ಇಲ್ಲಿ ಅನುಸಂಧಾನಮಾಡಬೇಕು. ಪೂರ್ವಾ ಚಾರ್ಯರುಗಳ ಪ್ರಪತ್ತಿಯಲ್ಲಿ ನಮ್ಮ ರಕ್ಷಣೆಯೂ ಅಂತರ್ಗತವೇ ಆಗಿದೆ 'ಮಾಂ ಮದೀಯಂ ಚ ನಿಖಿಲಂ ಚೇತನಾಚೇತನಾತ್ಮಕಂ। ಸ್ವಕೈಂಕರ್ಯೋ ಪಕರಣಂ ವರದ ಸ್ವೀಕುರು ಸ್ವಯಂ; ಎಂಬ ಕ್ರಮದಲ್ಲಿ ಪ್ರಾಚೀನಾಚಾರ್ಯರು ಶರಣಾಗತಿ ಮಾಡಿರುವ ಕಾರಣ ಅವರೊಡನೆ ಸಂಬಂಧ ಹೊಂದಿದ ನಮ್ಮ ರಕ್ಷಣೆಯ ಭಾರವನ್ನೂ ಅವರೇ ಭಗವಂತನಲ್ಲಿ ಅರ್ಪಿಸಿದ್ದಾರೆ. ಹೀಗಾಗಿ ನಾವು ಈಗ ಹೇಳುವ ಈ ಪ್ರಪತ್ತಿ ಪುನರುಕ್ತವಾಗಿದೆಯಷ್ಟೆ. 'ಪಿತಾಮಹಂ ನಾಥಮುನಿಂ ವಿಲೋಕ್ಯ ಪ್ರಸೀದ ಮದ್ವೃತ್ತಮಚಿಂತಯಿತ್ವಾ' ಎಂದು ಯಾಮುನರು ಹೇಳಿದಂತೆ ನಮ್ಮ ಆಚಾರ್ಯರುಗಳನ್ನು ನೋಡಿ ನಮ್ಮನ್ನು ರಕ್ಷಿಸಬೇಕೆಂದು ಬೇಡಿದ್ದಾರೆ.

ಯದ್ವಾ ಮದರ್ಥಪರಿಚಿನ್ತನಯಾ ತವಾಲಂ
ಸಂಜ್ಞಾಂ ಪ್ರಪನ್ನ ಇತಿ ಸಾಹಸಿಕೋ ಬಿಭರ್ಮಿ।
ಏವಂ ಸ್ಥಿತೇ ತ್ವದಪವಾದನಿವೃತ್ತಯೇ ಮಾಂ
ಪಾತ್ರೀಕುರುಷ್ವ ಭಗವನ್ಭವತಃ ಕೃಪಾಯಾಃ ॥೩೦॥

(ಭಗವನ್) ಎಲೈ ದೇವನೇ, (ಯದ್ವಾ) ಅಥವಾ, (ಮದರ್ಥಪರಿ ಚಿಂತನಯಾ) ನಾನು ಶರಣುಹೋದ ಬಗೆಯೇ ಮೊದಲಾದುವುಗಳನ್ನು ಯೋಚಿಸುವ ವಿಚಾರ, (ತವ) ನಿನಗೆ, (ಅಲಂ) ಬೇಡ. (ಸಾಹಸಿಕಃ) ಸಾಹಸಮಾಡುವ ಸ್ವಭಾವದ ನಾನು, (ಪ್ರಪನ್ನ ಇತಿ) ಪ್ರಪನ್ನನೆಂಬ, (ಸಂಜ್ಞಾಂ) ಗುರುತನ್ನು, (ಬಿಭರ್ಮಿ) ಧರಿಸಿಬಿಟ್ಟಿದ್ದೇನೆ. (ಏವಂ ಸ್ಥಿತೇ) ಹೀಗಿರಲಾಗಿ, (ತ್ವದಪವಾದ ನಿವೃತ್ತಯೇ) ನಿನಗೊದಗುವ ಅಪವಾದವನ್ನು ತಪ್ಪಿಸಿಕೊಳ್ಳುವುದಕ್ಕಾಗಿ, (ಮಾಂ) ನನ್ನನ್ನು, (ಭವತಃ) ನಿನ್ನ, (ಕೃಪಾಯಾಃ) ದಯೆಗೆ, (ಪಾತ್ರೀಕುರುಷ್ವ) ಪಾತ್ರನನ್ನಾಗಿಸು.

ಈ ಶ್ಲೋಕದಲ್ಲಿ ಆಚಾರ್ಯರು ಭಗವಂತನ ನಿರುಪಾಧಿಕವಾದ ದಯೆಯನ್ನು ಬೇಡಿದ್ದಾರೆ. ನಾವು ಪ್ರಪನ್ನರೆಂಬ ಸಂಜ್ಞೆಯನ್ನು ಹೊಂದಿಬಿಟ್ಟಿದ್ದೇವೆ. ಇದು ಅಹೃದಯವಾದುದಾದರೂ ನಮಗೆ ರಕ್ಷಣೆಗ ಸಂದೇಹವಿಲ್ಲ. ಪ್ರಪನ್ನನನ್ನು ರಕ್ಷಿಸುತ್ತೇನೆಂಬ ಪ್ರತಿಜ್ಞೆಮಾಡಿದ್ದಾನೆ ಭಗವಂತ. ತನ್ನ ಪ್ರತಿಜ್ಞೆಗೆ ಭಂಗಬಂತೆಂಬ ಅಪವಾದಕ್ಕೆ ಅವನು ಗುರಿಯಾಗಬೇಕಾಗುತ್ತದೆ ನಮ್ಮನ್ನು ಅವನು ಕಾಪಾಡದೆ ಹೋದರೆ. ಆದ್ದರಿಂದ ನಮ್ಮ ರಕ್ಷಣೆಯ ಫಲ ಅವನಿಗೇ ಎಂದು ಸೂಚಿಸಿ ತನಗಾಗಿಯಾದರೂ ರಕ್ಷಿಸಬೇಕೆಂದು ಬೇಡಿದ್ದಾರೆ.

ತ್ಯಾಗೇ ಗುಣೇಶ ಶರಣಾಗತಸಂಜ್ಞಿನೋ ಮೇ
  ಸ್ವಾತ್ಯನಾಗಸೋಽಪಿ ಸಹಸೈವ ಪರಿಗ್ರಹೇ ವಾ ।
ಕಿಂ ನಾಮ ಕುತ್ರ ಭವತೀತಿ ಕೃಪಾದಿಭಿಸ್ತೇ
  ಗೂಢಂ ನಿರೂಪಯ ಗುಣೇತರತಾರತಮ್ಯಮ್ ॥೫೧॥

(ಸ್ವಾತ್ಯನಾಗಸೋಽಪಿ) ಪಾಪದ ಲೇಪವನ್ನು ಹೊಂದಿದ್ದಾಗ್ಯೂ, (ಗುಣೇಶ) ಎಲೈ ಗುಣಸಾರ್ವಭೌಮನೇ, (ಶರಣಾಗತಸಂಜ್ಞಿನಃ) ಶರಣಾಗತನೆಂಬ, ಚಿಹ್ನೆಯನ್ನು ಧರಿಸುವ, (ಮೇ) ನನ್ನ, (ತ್ಯಾಗೇ) ಪರಿತ್ಯಾಗದಲ್ಲಾಗಲೀ, (ವಾ) ಅಥವಾ, (ಸಹಸೈವ ಪರಿಗ್ರಹೇ) ತಟ್ಟನೆ ಸ್ವೀಕಾರ ಮಾಡುವುದರಲ್ಲಾಗಲೀ, (ಕಿಂ ನಾಮ ಕುತ್ರ ಭವತೀತಿ) ಎಲ್ಲಿ ಏನುಂಟಾಗುವುದೆಂಬದಾಗಿ, (ಗುಣೇತರ ತಾರತಮ್ಯಮ್) ಗುಣದೋಷಗಳ ವ್ಯತ್ಯಾಸವನ್ನು, (ತೇ ಕೃಪಾದಿಭಿಃ) ನಿನ್ನ ದಯೆಯೇ ಮೊದಲಾದ ಗುಣಗಳೊಡನೆ, (ಗೂಢಂ ನಿರೂಪಯಾ) ಗೂಢವಾಗಿ ಆಲೋಚನೆಯನ್ನು ನಡೆಸುವವನಾಗು.

ನಾವು ಕೃತಾಪರಾಧರು ; ಆದರೆ ಶರಣಾಗತರೆಂಬ ಹೆಸರನ್ನು ಇಟ್ಟುಕೊಂಡಿದ್ದೇವೆ. ನಮ್ಮನ್ನು ಭಗವಂತನು ಪರಿಗ್ರಹಿಸಬೇಕೇ ಬೇಡವೇ ಎಂಬುದನ್ನೂ ಯಾವುದರಲ್ಲಿ ಗುಣವಿದೆ ಅಥವಾ ದೋಷವಿದೆ ಎಂಬುದನ್ನೂ ನಿನ್ನ ಕಾರುಣ್ಯಾದಿ ಗುಣಗಳೊಡನೆ ಮಂತ್ರಾಲೋಚನೆ ನಡೆಸಿ ನೋಡು ಎಂದು ಇಲ್ಲಿ ಬೇಡುತ್ತಿದ್ದಾರೆ ಭಗವದ್ದಯೆಗೆ ಆಶ್ರಿತರ ವಿಚಾರದಲ್ಲಿ ಬಹಳ ಪಕ್ಷಪಾತ. ಭಗವಂತನ ಶಾಸನವನ್ನು ಉಲ್ಲಂಘಿಸಿರುವವರಲ್ಲಿಯೂ ದಯಾದೇವಿ

ಭಗವಂತನ ಕ್ಷಮೆಯನ್ನು ಒದಗಿಸಿಕೊಡುವವಳಾಗಿದ್ದಾಳೆ. ಭಗವಂತನಿಗೆ ದಯೆತೋರುವುದೇ ಸ್ವಭಾವ. ಭಗವಂತನ ಇತರ ಗುಣಗಳಾದ ಜ್ಞಾನ ಶಕ್ತ್ಯಾದಿಗಳು ನಿಗ್ರಹವನ್ನೊದಗಿಸಿದರೆ ಅವನ ಕರುಣೆ ಯಾವಾಗಲೂ ಅನುಗ್ರಹೈಕಮಯವಾಗಿದೆ : ಇತರ ಗುಣಗಳೊಡನೆ ವಾದಮಾಡಿ ಸೋಲಿಸಿ ಆಶ್ರಿತರ ಅಭೀಷ್ಟವನ್ನೂ ರಕ್ಷಣೆಯನ್ನೂ ಸಾಧಿಸಬಲ್ಲದು ಅವನ ದಯೆ. ದಯೆ ಇಲ್ಲದಿದ್ದರೆ ಇತರ ಗುಣಗಳೆಲ್ಲಾ ದೋಷಗಳೇ ಆಗುವುವೆಂದು ಆಚಾರ್ಯರು

ವೃಷಗಿರಿಗೃಹಮೇಧಿಗುಣಾಬೋಧಬಲೈಶ್ವರ್ಯವೀರ್ಯಶಕ್ತಿಮುಖಾಃ ।
ದೋಷಾಭವೇಯುರೇತೇ ಯದಿನಾಮ ದಯೇ ತ್ವಯಾ ವಿನಾ ಭೂತಾಃ ॥

ಎಂದು ಬಣ್ಣಿಸಿದ್ದಾರೆ.

ಭಗವಂತನು ತನ್ನ ಕಾರುಣ್ಯವೇ ಮೊದಲಾದ ಗುಣಗಳೊಡನೆ ನಮ್ಮನ್ನು ತ್ಯಾಗ ಮಾಡಬೇಕೇ ಪರಿಗ್ರಹ ಮಾಡಬೇಕೇ ಎಂದು ಮಂತ್ರಾಲೋಚನೆ ನಡೆಸಿದಾಗ ಅವನ ಕರುಣೆ ನಮ್ಮ ಪರವಾಗಿ ವಾದಮಾಡಿ ಗೆಲ್ಲುವುದು ಖಂಡಿತ; ನಮ್ಮ ರಕ್ಷಣೆಯೂ ನಿಶ್ಚಿತ. ಇದನ್ನೇ ದಯಾಶತಕದಲ್ಲಿ

'ಮಹತಿಗುಣಸಮಾಜೇ ಮಾನಪೂರ್ವಂ ದಯೇ ತ್ವಂ ।
ಪ್ರತಿವದಸಿ ಯಥಾರ್ಹಂ ಪಾಪ್ಮನಾಂ ಮಾಮಕಾನಾಂ ॥

ಎಂದು ನಿರೂಪಿಸಿದ್ದಾರೆ ಶರಣಾಗತನೆಂಬ ಸಂಜ್ಞೆಯನ್ನು ತೊಟ್ಟವನಾದ ನನ್ನನ್ನು ಪರಿಗ್ರಹಿಸುವುದರಲ್ಲಿ ನಿನಗೆ ಲಾಭವಿದೆ, ಗುಣವಿದೆ ಎಂಬುದನ್ನು ನೀನು ನಿನ್ನ ಗುಣಗಳೊಡನೆ ಆಲೋಚಿಸಿದರೆ ತಿಳಿಯುತ್ತೀಯೆ ಎಂಬ ಭಾವ. ಆದ್ದರಿಂದ ನಮ್ಮನ್ನು ಪರಿಗ್ರಹಿಸಿ ಅದರ ಪ್ರಯೋಜನವನ್ನು ನೀನೇ ಪಡೆದುಕೊಳ್ಳಬಹುದೆಂದು ಈ ಶ್ಲೋಕದಲ್ಲಿ ನಿರೂಪಿಸಿದ್ದಾರೆ.

**ಸ್ವಾಮೀ ದಯಾಜಲನಿಧಿರ್ಮಧುರಃ ಕ್ಷಮಾವಾನ್**
**ಶೀಲಾಧಿಕಃ ಶ್ರಿತವಶಃ ಶುಚಿರತ್ಯುದಾರಃ ।**
**ಏತಾನಿ ಹಾತುಮನಘೋ ನ ಕಿಲಾರ್ಹಸಿ ತ್ವಂ**
**ವಿಖ್ಯಾತಿಮನ್ತಿ ಬಿರುದಾನಿ ಮುಧಾ ಸಹ್ಯೈವ** ॥೫೨॥

(ಅನಘೆ) ಎಲೈ ದೋಷದೂರನೇ, (ಸ್ವಾಮೀ) ಒಡೆಯನು, (ದಯಾ ಜಲನಿಧಿಃ) ಕರುಣಾಸಾಗರನು, (ಮಧುರಃ) ಮಧುರನಾದವನು, (ಕ್ಷಮಾ ವಾನ್) ಕ್ಷಮಾಶಾಲಿಯು, (ಶೀಲಾಧಿಕಃ) ಇತರರಿಗಿಂತ ಹೆಚ್ಚಾಗಿ ಸೌಶೀಲ್ಯ ವುಳ್ಳವನು, (ಶ್ರಿತವಶಃ) ಆಶ್ರಿತರಿಗಧೀನನಾದವನು, (ಅತ್ಯುದಾರಃ) ಬಹಳ ಉದಾರಿಯಾದವನು, (ಏತಾನಿ) ಇವೇ ಮೊದಲಾದ, (ವಿಖ್ಯಾತಿಮಂತಿ ಬಿರುದಾನಿ) ಪ್ರಖ್ಯಾತವಾದ ಬಿರುದುಗಳನ್ನೂ ಸಹ, (ಸಹೈವಮಯಾ) ನನ್ನ ಜತೆಗೇ, (ಹಾತುಂ) ತ್ಯಾಗಮಾಡಲು, (ತ್ವಂ ನಾರ್ಹಸಿ) ನಿನಗೆ ತಕ್ಕು ದಲ್ಲವಷ್ಟೇ ?

ಆಚಾರ್ಯಯಾಮುನರು 'ವಶೀ ವದಾನ್ಯಃ ಗುಣವಾನ್' ಎಂಬು ದಾಗಿ ಭಗವಂತನ ಅನಂತ ಕಲ್ಯಾಣ ಗುಣಗಳನ್ನು ಅನುಸಂಧಾನ ಮಾಡಿರು ವಂತೆ ಈ ಶ್ಲೋಕವಲ್ಲಿ ಆಚಾರ್ಯರು ಭಗವದ್ಗುಣಾನುಸಂಧಾನ ಮಾಡಿ ದ್ದಾರೆ. ಹಾಗೂ ಆಶ್ರಿತರನ್ನು ಸಂರಕ್ಷಿಸುವುದರ ಮೂಲಕ ಜಗಜ್ಜನಿತವಾದ ಆ ಬಿರುದುಗಳನ್ನೂ ರಕ್ಷಿಸಿಕೊಳ್ಳಬೇಕೆಂದು ಬೇಡಿದ್ದಾರೆ. ನಮ್ಮನ್ನು ಅವನು ರಕ್ಷಿಸಿದರೆ ಅದರ ಫಲ ಅವನಿಗೇ ಆಗುತ್ತದೆ. ನಮ್ಮನ್ನು ತ್ಯಜಿಸಿಬಿಟ್ಟರೆ ಅವ ನಿಗೇ ನಷ್ಟ. ಏಕೆಂದರೆ ಅವನ ವಿಖ್ಯಾತವಾದ ಬಿರುದುಗಳು ಸುಳ್ಳಾಗಿ ಹೋಗುವುವು. ಹೀಗೆ ಅವನ ದಯಾಪ್ರವಾಹ ನಮ್ಮ ಮೇಲೆ ಪ್ರವಹಿಸ ಲೆಂದು ಕೋರಿದ್ದಾರೆ.

'ಸರ್ವಸ್ಯವಶೀ ಸರ್ವಸ್ಯೇಶಾನಃ' ಎಂದಂತೆ ಅವನು ಎಲ್ಲಕ್ಕೂ ಸ್ವಾಮಿ ಯಾಗಿದ್ದಾನೆ. 'ದಾಸಭೂತಾಃ ಸ್ವತಸ್ಸರ್ವೇ ಆತ್ಮಾನಃ ಪರಮಾತ್ಮನಃ' ಎಂದಂತೆ ನಾವೆಲ್ಲ ಅವನ ದಾಸರು. ತನ್ನ ಒಡವೆಯನ್ನು ಕಾಪಾಡಿಕೊಳ್ಳ ಬೇಕಾದುದು ಸ್ವಾಮಿಗೆ ಸೇರಿದ ಜವಾಬ್ದಾರಿ. ಒಡವೆಯ ರಕ್ಷಣೆ ಅಥವಾ ನಾಶದಿಂದಾಗುವ ಲಾಭ ನಷ್ಟಗಳೂ ಯಜಮಾನನದೇ. ಭಗವಂತನು ದಯಾ ಜಲನಿಧಿ. ಇತರರ ದುಃಖವನ್ನು ನಿರಾಕರಿಸಲು ಮುಂದಾಗುವವನು ಅವನು. ಯಾವ ಸ್ವಾರ್ಥದ ಬಯಕೆಯೂ ಇಲ್ಲದೆ 'ಸ್ವಾರ್ಥನಿರಪೇಕ್ಷಪರದುಃಖ ನಿರಾಕರಣೇಚ್ಛೆ'ಯೇ ದಯೆ. ಮಧುರನೆಂದರೆ ನಿರತಿಶಯವಾದ ಆನಂದ ಸ್ವರೂಪನೆಂದರ್ಥ. 'ರಸೋ ವೈ ಸಃ', 'ಆನಂದೋ ಬ್ರಹ್ಮ' ಎಂದು ಇದನ್ನೇ ಹೇಳಿದೆ.

ಫಲದಶೆಯಲ್ಲಿ ಹೇಗೆಯೋ ಹಾಗೆಯೇ ಉಪಾಯದಶೆಯಲ್ಲಿಯೂ ಅವನು ಮಧುರನೇ. 'ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ' ಎಂದು ತಾನೇ ಹೇಳಿಕೊಂಡಿದ್ದಾನೆ. 'ಪ್ರಿಯವಾದೀ ಚ ಭೂತಾನಾಂ' 'ಸೋಮವತ್ಪ್ರಿಯದರ್ಶನಃ' 'ಸಾಕ್ಷಾನ್ಮನ್ಮಥಮನ್ಮಥಃ' ಮುಂತಾದವು ಅವನ ಮಾಧುರ್ಯವನ್ನು ಹೇಳುತ್ತವೆ.

ಕ್ಷಮಾಶಾಲಿಗಳಲ್ಲಿ ಅಗ್ರೇಸರನವನು. ಅಪರಾಧ ಮಾಡಿದವರೂ ಸಹ ಅವನನ್ನು ಆಶ್ರಯಿಸಲು ಸಾಧ್ಯವಾಗಿರುವುದು ಅವನ ಕ್ಷಮಾಗುಣದಿಂದ. 'ಕ್ಷಮಯಾ ಪೃಥಿವೀ ಸಮಃ' ಎಂದು ಇದನ್ನು ಹೇಳಿದೆ. 'ತ್ರೀನ್‌ಲೋಕಾನ್ ಸಂಪರಿಕ್ರಮ್ಯ ತಮೇವ ಶರಣಂಗತಃ' ಎಂದಂತೆ ಅಸಹ್ಯಾಪಚಾರ ಮಾಡಿದ್ದ ಕಾಕಾಸುರನು ಕಾಲಿಗೆ ಬಿದ್ದಾಗ ಅವನನ್ನು ಕೃಪೆಯಿಂದ ಕಾಪಾಡಿದನವನು. ಇದನ್ನೇ ಸೀತಾಮಾತೆಯೂ 'ವಧಾರ್ಹ ಕಾಕುತ್ಸ್ಥಃ ಕೃಪಯಾ ಪರ್ಯ ಪಾಲಯತ್' 'ವಿದಿತಸ್ಸಹಿ ಧರ್ಮಜ್ಞಃ ಶರಣಾಗತವತ್ಸಲಃ। ತೇನ ಮೈತ್ರೀ ಭವತು ತೇ ಯದಿ ಜೀವಿತುಮಿಚ್ಛಸಿ॥' ಎಂದು ಉಪದೇಶಿಸಿದಳು. ಭಗವಂತನು ತನ್ನ ಸೌಶೀಲ್ಯದಿಂದ ಸರ್ವಾಧಿಕಾರನಾಗಿದ್ದಾನೆ. 'ಮಹತಾ ಮಂದೈಃಸಹ ನೀರಂಧ್ರಸಂಶ್ಲೇಷಃ' ಎಂದು ಈ ಗುಣವನ್ನು ನಿರೂಪಿಸಿದ್ದಾರೆ. ಬೇಡನಾದ ಗುಹ, ಕಪಿಕುಲಪತಿಯಾದ ಸುಗ್ರೀವ, ಶಬರೀ, ಕುಚೇಲ, ಕುಬ್ಜೆ ಗೋಪಿಕೆಯರು ಇವರೆಲ್ಲರೊಡನೆ ಅವನು ಸಮರಸವಾಗಿ ಬೆರೆತು ತನ್ನ ಸೌಶೀಲ್ಯವನ್ನು ತೋರಿದನು. ಆಶ್ರಿತ ಪರತಂತ್ರನವನು. 'ಅನನ್ಯಾಧೀನಃ ಸನ್ ಭವತಿ ಪರತಂತ್ರಪ್ರಣಮತಾಂ' ಎಂದು ಇದನ್ನು ಆಚಾರ್ಯರು ಅನುಭವಿಸಿದ್ದಾರೆ. ಸಕಲಲೋಕನಿರ್ವಾಹಕನಾದ ಪ್ರಭು ಆಶ್ರಿತವತ್ಸಲನಾದ ಕಾರಣ ಪಾರ್ಥನಿಗೆ ಸಾರಥಿಯಾಗಿ ತೇರನ್ನೂ ನಡೆಸಿದನು. ಶುಚಿಃ ಎಂಬುದು ಅವನ ಪಾವನತ್ವವನ್ನು ಸೂಚಿಸುತ್ತದೆ. 'ಪಾವನಃ ಸರ್ವಭೂತಾನಾಂ ತ್ವಮೇವ ರಘುನಂದನ। ಪವಿತ್ರಾಣಾಂ ಹಿ ಗೋವಿಂದಃ ಪವಿತ್ರಂ ಪರಮುಚ್ಯತೇ॥ ಪವಿತ್ರಾಣಾಂ ಪವಿತ್ರಂ ಯೋ ಮಂಗಳಾನಾಂ ಚ ಮಂಗಳಂ। ಶುಚಿರ್ಭವತಿ ಸಂಸ್ಮೃತ್ಯ ಸ್ನಾತೋ ಭವತಿ ದರ್ಶನಾತ್। ಪ್ರಣಿಪಾತೇನ ಪೂತಾತ್ಮಾತ್ರಯಃ ಕೃಷ್ಣೇ ಮಹಾಗುಣಾಃ॥ ಎಂದು ವಿವರಿಸಿದ್ದಾರೆ ಇದನ್ನೇ. ಅಪಹತಪಾಪ್ಮತ್ವಾದಿಗುಣ ವಿಶಿಷ್ಟನಾಗಿರುವುದೂ ಶುಚಿತ್ವವೆನಿಸುವುದು.

ಯಾವ ಹೇಯಗುಣ ಗಂಧವೂ ಇಲ್ಲದೆ ಸಮಸ್ತ ಕಲ್ಯಾಣಗುಣಗಳಿಗೆ ಅವನು ಹೀಗೆ ಆಗರವಾಗಿರುವನು. ತನ್ನಿಂದ ಪ್ರಯೋಜನವನ್ನು ಪಡೆದ ಭಕ್ತರನ್ನೇ 'ಉದಾರಾಸ್ಸರ್ವ ಏವೈತೇ' ಎಂದು ಕೊಂಡಾಡುವವನವನು. ಪ್ರಿಯವಾದ ಮಾತುಗಳನ್ನು ಹೇಳಿ ದಾನಮಾಡುವವನು ಅವನು. 'ಸ ಸರ್ವಾನರ್ಥಿನೋ ದೃಷ್ಟ್ವಾ ಸಮೇತ್ಯ ಪ್ರತಿನಂದ್ಯ ಚ' ಮುಂತಾದವುಗಳನ್ನು ಇಲ್ಲಿ ಸ್ಮರಿಸ ಬೇಕು. ಅವನು ಸ್ವಾತ್ಮಪರ್ಯಂತವಾಗಿ ಸರ್ವಸ್ವವನ್ನೂ ದಾನಮಾಡಿ ಬಿಡುವವನಾದುದರಿಂದ 'ಅತ್ಯುದಾರ'ನಾಗಿದ್ದಾನೆ.

ತಸ್ಮಾತ್ತ್ವಮಪಿ ವಿಪ್ರೇಂದ್ರ ನಾರಾಯಣಪರೋಭವ ।
ತದನ್ಯಃ ಕೋ ಮಹೋದಾರಃ ಪ್ರಾರ್ಥಿತಂ ದಾತುಮೀಶ್ವರಃ ॥

ಎಂಬಲ್ಲಿ ಅವನ ಔದಾರ್ಯದ ವರ್ಣನೆಯನ್ನು ಕಾಣಬಹುದು. ಈ ಬಿರುದುಗಳು ಉಳಿಯಬೇಕಾದರೆ ನನ್ನನ್ನು ನೀನು ಒಪ್ಪಿಸಿಕೊಳ್ಳಬೇಕು. ಇಲ್ಲದಿದ್ದರೆ ಇವು ಹೋದಂತೆಯೇ ಎಂದು ಬೇಡಿದ್ದಾರೆ.

**ವೇಲಾಧನಂಜಯರಥಾದಿಷು ವಾಚಿಕೈಃ ಸ್ವೈ-**
**ರಾಘೋಷಿತಾಮಖಿಲಜನ್ತುಶರಣ್ಯತಾಂ ತೇ ।**
**ಜಾನನ್ ದಶಾನನಶತಾದಧಿಕಾಗಸೋಽಪಿ**
**ಪಶ್ಯಾಮಿ ದತ್ತಮಭಯಂ ಸ್ವಕೃತೇ ತ್ವಯಾ ಮೇ ॥೫೩॥**

(ವೇಲಾಧನಂಜಯರಥಾದಿಷು) ಸಾಗರತೀರದಲ್ಲಿಯೂ ಅರ್ಜುನನ ರಥವೇ ಮುಂತಾದುವುಗಳಲ್ಲಿಯೂ (ಸ್ವೈಃವಾಚಿಕೈಃ) ನಿನ್ನ ಮಾತುಗಳಿಂದಲೇ (ಆಘೋಷಿತಾಃ) ಸಾರಿಹೇಳಲ್ಪಟ್ಟ (ತೇ) ನಿನ್ನ(ಅಖಿಲ ಜನ್ತುಶರಣ್ಯತಾಂ) ಸಕಲ ಪ್ರಾಣಿಗಳಿಗೂ ನೀನೇಶರಣ್ಯನೆಂಬವಿಷಯವನ್ನು, (ಜಾನನ್) ತಿಳಿದವನಾಗಿ (ದಶಾನನ ಶತಾದಧಿಕಾಗಸೋಽಪಿ) ನೂರುಮಂದಿ ರಾವಣರ ಪಾಪಕ್ಕಿಂತಲೂ ಹೆಚ್ಚಿದ ಪಾಪವುಳ್ಳವನಾದರೂ (ಮೇ) ನನಗೆ (ಸ್ವಕೃತೇ) ನಿನ್ನ ಸ್ವಪ್ರಯೋಜನಕ್ಕಾಗಿಯೇ (ಅಭಯಂ ದತ್ತಂ) ಅಭಯವು ಕೊಡಲ್ಪಟ್ಟದೆಯೆಂದು (ಪಶ್ಯಾಮಿ) ಕಾಣುತ್ತೇನೆ.

ಹಿಂದಿನ ಶ್ಲೋಕದಲ್ಲಿ ನಮ್ಮನ್ನು ಕೈಬಿಟ್ಟರೆ ಅವನ ಗುಣಗಳಿಗೆ ಹಾನಿ ಯುಂಟಾಗುವುದೆಂದು ಸೂಚಿಸಿದರು. ಈ ಶ್ಲೋಕದಲ್ಲಿ ನಮಗೂ ಅವನ ಅಭಯ ಕೊಡಲ್ಪಟ್ಟಿಇದೆ ಎಂಬುದನ್ನು ನಿರೂಪಿಸುತ್ತಾರೆ. ಭಗವಂತನು ತನ್ನ ಸರ್ವಶರಣ್ಯತ್ವವನ್ನು ತಾನೇ ಸಾರಿ ತಿಳಿಸಿದ್ದಾನೆ. ವಿಭೀಷಣನು ತನ್ನಲ್ಲಿ ಬಂದು ಮರೆಹೊಕ್ಕ ಸಮಯದಲ್ಲಿ ಸಾಗರತೀರದಲ್ಲಿ ಶ್ರೀ ರಾಮಚಂದ್ರನು

ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ ।
ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ ॥

ಎಂದೂ 'ಆನಯೈನಂ ಹರಿಶ್ರೇಷ್ಠ ದತ್ತಮಸ್ಯಾಭಯಂ ಮಮ' ಎಂದೂ ಉದ್ಘೋಷಿಸಿದನು. ಇಲ್ಲಿ ಬಂದಿರುವವನು 'ವಿಭೀಷಣೋ ವಾ ಸುಗ್ರೀವ ಯದಿ ವಾ ರಾವಣ ಸ್ಸ್ವಯಂ' ಎಂದಂತೆ ರಾವಣನೇ ಆಗಿದ್ದರೂ ಕರೆದು ಕೊಂಡೇ ಬಾ ಅವನಿಗೆ ಅಭಯವನ್ನಾಗಲೇ ಕೊಟ್ಟಾಯಿತು ಎಂದು ಶ್ರೀರಾಮ ಚಂದ್ರ ಘೋಷಿಸಿದನು ಸಕಲಲೋಕಕ್ಕೂ ತಿಳಿಯುವಂತೆ. ಕೃಷ್ಣಾವತಾರ ದಲ್ಲಿ ಅರ್ಜುನನಿಗೆ ಸಾರಥಿಯಾಗಿ ನಿಂತು ಅವನಿಗೆ ಪರಮತತ್ವವನ್ನುಪದೇಶಿ ಸುತ್ತಾ—

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥

ಎಂದು ಭರವಸೆಕೊಟ್ಟಿದ್ದಾನೆ. ಭಗವಂತನ ಈ ವಾಣಿ ನಮಗೆ ಆಶ್ವಾಸನೆ ಯನ್ನುಂಟುಮಾಡುತ್ತದೆ. ರಾವಣನಿಗಿಂತ ನೂರುಮಡಿ ಪಾಪ ನಮ್ಮದಾಗಿ ದ್ದರೂ ಅವನೊಬ್ಬನು ಸರ್ವಪಾಪಗಳಿಂದಲೂ ನಮ್ಮನ್ನು ಬಿಡಿಸುವನೆಂಬ ಧೈರ್ಯ ನಮಗೊದಗಿದೆ. ನಮಗೂ ಅಭಯವು ಆಗಲೇ ಕೊಡಲ್ಪಟ್ಟಿದೆ. ಅದನ್ನು ಉಪಯೋಗಿಸಿಕೊಳ್ಳಬೇಕಾದುದಷ್ಟೇ ನಮ್ಮ ಕರ್ತವ್ಯ. ಯಾವ ಬಗೆಯ ಗುಣದೋಷಗಳ ತಾರತಮ್ಯವನ್ನೆಣಿಸದೆ ತನ್ನನ್ನು ಮರೆಹೊಕ್ಕವರೆ ಲ್ಲರನ್ನೂ ಸಂರಕ್ಷಿಸುವ ವೀರವ್ರತವನ್ನವನು ಹೊತ್ತಿರುವಕಾರಣ ನಮ್ಮ ರಕ್ಷಣೆಗೆ ಯಾವ ತೊಂದರೆಯೂ ಇಲ್ಲ. ಈ ರಕ್ಷಣೆಯನ್ನವನು ಕೊಡುವುದೂ ಅವನಿಗಾಗಿಯೇ. ಇದನ್ನು 'ಸ್ವಕೃತೇ' ಎಂದು ಸೂಚಿಸಿದ್ದಾರೆ. ತನ್ನ ಮಾತನ್ನುಳಿಸಿಕೊಳ್ಳಲು ತಾನು ನುಡಿದಂತೆ ನಡೆಯಬೇಕಾದುದರಿಂದ ಅವನು ನಮ್ಮನ್ನು ರಕ್ಷಿಸಲೇಬೇಕಾಗಿದೆ ಎಂದು ಅನುಭವಿಸಿ ಸರ್ವಶರಣ್ಯತ್ವವೆಂಬ ಗುಣದಲ್ಲಿ ಮಗ್ನರಾಗಿದ್ದಾರೆ.

ರಕ್ಷ್ಯಸ್ತ್ವಯೋ ತವಭರೋಽಸ್ಮ್ಯಹಮಿತ್ಯಪೂರ್ವಾ-
ನ್ವರ್ಣಾನಿಮಾನಹೃದಯಾನಪಿ ವಾಚಯಿತ್ವಾ।
ಮದ್ದೋಷನಿರ್ಜಿತಗುಣೋ ಮಹಿಷೀಸಮಕ್ಷಂ
ಮಾ ಭೂಸ್ತ್ವದನ್ಯ ಇವ ಮೋಘಪರಿಶ್ರಮಸ್ತ್ವಮ್ ॥೫೪॥

(ಅಹಂ) ನಾನು, (ತ್ವಯಾ) ನಿನ್ನಿಂದ, (ರಕ್ಷ್ಯಃ) ಕಾಪಾಡಲ್ಪಡ ಬೇಕಾದವನು. (ತವಭರಃ) ನಿನ್ನಲ್ಲಿ ರಕ್ಷಣೆಯ ಭಾರವನ್ನಿಟ್ಟವನಾಗಿ, (ಅಸ್ಮಿ) ಇದ್ದೇನೆ, (ಇತಿ) ಹೀಗೆಂಬ, (ಅಪೂರ್ವಾನ್‌ವರ್ಣಾನ್) ಅಪೂರ್ವವಾದ ಅಕ್ಷರಗಳನ್ನು (ಅಹೃದಯಾನಪಿ) ಮನಃಪೂರ್ವಕವಾಗಿಲ್ಲದಿದ್ದರೂ, (ವಾಚ ಯಿತ್ವಾ) ನನ್ನಿಂದ ಹೇಳಿಸಿಬಿಟ್ಟು, (ಮದ್ದೋಷ ನಿರ್ಜಿತಗುಣಃ) ನನ್ನ ಆ ದೋಷಗಳಿಂದ ಗೆಲ್ಲಲ್ಪಟ್ಟ ಗುಣಗಳುಳ್ಳವನಾಗಿ, (ಮಹಿಷೀಸಮಕ್ಷಂ) ನಿನ್ನ ದೇವಿಯ ಎದುರಿನಲ್ಲಿ, (ಮೋಘಪರಿಶ್ರಮಃ) ವ್ಯರ್ಥವಾದ ಶ್ರಮವುಳ್ಳವ ನಾಗಿ, (ತ್ವಮ್) ನೀನು, (ತ್ವದನ್ಯ ಇವ) ನಿನಗಿಂತ ಬೇರೆಯವರಂತೆ, (ಮಾಭೂಃ) ಆಗಬೇಡ.

ಈ ಶ್ಲೋಕದಲ್ಲಿ ಆಚಾರ್ಯರು ಭಗವಂತನಲ್ಲಿ ಸಲ್ಲಿಸಿರುವ ಬೇಡಿಕೆ ಯಾದರೋ ನಮ್ಮ ರಕ್ಷಣೆಯಲ್ಲಿ ಅವನು ಜಾಗೃತನಾಗಿರಬೇಕೆಂಬುದೇ ಆಗಿದೆ. ನಾವು ಮನಃಪೂರ್ವಕವಾಗಿ ಅವನಲ್ಲಿ ಶರಣಾಗತಿ ಮಾಡದೆ ಇರ ಬಹುದು. ಆದರೂ ಶರಣಾಗತಿ ವಾಕ್ಯವನ್ನು ಉಚ್ಚರಿಸಿದ್ದೇವೆ. ಆದುದ ರಿಂದಲೇ ಅವನು ನಮ್ಮನ್ನು ಕಾಪಾಡಬೇಕು. 'ವಾಚಯಿತ್ವಾ' ಎಂಬುವುದ ರಿಂದ ಈ ಶರಣಾಗತಿವಾಕ್ಯವನ್ನು ಉಚ್ಚರಿಸುವಂತೆ ಮಾಡಿದವನೂ ಅವನೇ ಎಂದು ಗೊತ್ತಾಗುತ್ತದೆ. ಹೇಗಾದರೂ ಶರಣಾಗತಿವಾಕ್ಯವನ್ನು ಹೇಳು ಎಂದು ಪ್ರೇರಿಸಿ, ಹೇಳಿಸಿಬಿಟ್ಟು, ಅನಂತರ ಕಾಪಾಡದಿರುವುದು ನಿನಗೆ ತಕ್ಕುದಲ್ಲ ವೆಂಬ ಭಾವ. ಹಾಗೆ ಆಗುವುದಾದರೆ ಆ ಗುಣಸಾರ್ವಭೌಮ ನಮ್ಮ ದೋಷ ಗಳಿಗೆ ಸೋತಂತೆಯೇ ಆಗುತ್ತದೆ. ಅವನು ಆ ವಾಕ್ಯವನ್ನು ನಮ್ಮಿಂದ ಹೇಳಿಸಲು ಪಟ್ಟ ಶ್ರಮವೂ ವ್ಯರ್ಥವಾಗುತ್ತದೆ. ಇದೆಲ್ಲಾ ದಿವ್ಯಮಹಿಷಿಯ ಎದುರಿಗೇ ಆದರೆ ಅದರಿಂದುಂಟಾಗುವ ಅಪಮಾನವು ಕಡಿಮೆಯಾದುದಲ್ಲ. ಆದ್ದರಿಂದ ಇಷ್ಟೆಲ್ಲಾ ಪರಾಭವಕ್ಕೆಡೆ ಮಾಡಿಕೊಡದೆ ನಮ್ಮ ರಕ್ಷಣೆಯನ್ನು

" ತತ್ತಸ್ಯ ಸದೃಶಂ ಭವೇತ್ " ಎಂಬಂತೆ ನೀನೇ ಸಾಧಿಸಬೇಕೆಂದು ಬೇಡಿದ್ದಾರೆ.

ಮುಖ್ಯಂ ಚ ಯತ್ಪ್ರಪದನಂ ಸ್ವಯಮೇವ ಸಾಧ್ಯಂ
ದಾತವ್ಯಮೀಶ ಕೃಪಯಾ ತದಪಿ ತ್ವಯೈವ।
ತನ್ಮೇ ಭವಚ್ಚರಣಸಙ್ಗವತೀಮವಸ್ಥಾಂ
ಪಶ್ಯನ್ನುಪಾಯಫಲಯೋರುಚಿತಂ ವಿಧೇಯಾಃ ॥೫೫॥

(ಈಶ) ಎಲೈ ಪ್ರಭುವೇ, (ಸ್ವಯಮೇವಸಾಧ್ಯಂ) ತನ್ನಿಂದಲೇ ಸಾಧಿಸಲ್ಪಡಬೇಕಾದುದೂ, (ಮುಖ್ಯಂ ಚ) ಮುಖ್ಯವೂ ಆದ, (ಯತ್ಪ್ರಪದನಂ) ಯಾವ ಶರಣಾಗತಿಯುಂಟೋ, (ತದಪಿ) ಅದೂ ಸಹ, (ತ್ವಯೈವ) ನಿನ್ನಿಂದಲೇ, (ಕೃಪಯಾ ದಾತವ್ಯಂ) ದಯೆಯಿಂದ, ಕೊಡಲ್ಪಡಬೇಕಾಗಿದೆ. (ತತ್) ಆದ್ದರಿಂದ, (ಭವಚ್ಚರಣಸಂಗವತೀಂ) ನಿನ್ನ ಪಾದಗಳನ್ನು ಸೇರಬೇಕೆಂದಿಚ್ಛಿಸುವ, (ಮೇ) ನನ್ನ (ಅವಸ್ಥಾಂ) ಸ್ಥಿತಿಯನ್ನು, (ಪಶ್ಯನ್) ನೋಡುವವನಾಗಿ, (ಉಪಾಯಫಲಯೋಃ) ಪುರುಷಾರ್ಥಪ್ರಾಪ್ತಿಗೂ ಅದನ್ನು ಸಾಧಿಸಬೇಕಾದ ವಿಧಾನಕ್ಕೂ ಸಹ, (ಉಚಿತಂ) ತಕ್ಕುದನ್ನು, (ವಿಧೇಯಾಃ) ನೀನೇ ಮಾಡುವವನಾಗು.

ನಾವು ಭಗವಂತನಲ್ಲಿ ಪ್ರಪತ್ತಿಮಾಡುವಾಗ ಅವನೇ ನಮ್ಮನ್ನು ಪ್ರೇರಿಸಿ ನಮ್ಮಿಂದ ಪ್ರಪತ್ತಿಯನ್ನು ಮಾಡಿಸಿ ಅದಕ್ಕೆ ಪ್ರೀತನಾಗಿ ತನ್ನ ನಿತ್ಯ ಕೈಂಕರ್ಯವನ್ನನುಗ್ರಹಿಸಿ ಅವನ ಸಂಶ್ಲೇಷದಿಂದ ಆನಂದಿಸುವ ನಮ್ಮನ್ನೇ ಕಂಡು ಆನಂದಿಸುತ್ತಾನೆ–ಭಗವಂತನೇ ನಮಗೆ ಉಪಾಯನೂ ಹೌದು, ಉಪೇಯವೂ ಹೌದು.

ಅಲ್ಪಾಸ್ಥಿರೈರಸುಕರೈರಸುಖಾವಸಾನೈ-
ರ್ದುಃಖಾನ್ವಿತೈರನುಚಿತೈರಭಿಮಾನಮೂಲೈಃ।
ಪ್ರತ್ಯಕ್ಪರಾಗನುಭವೈಃ ಪರಿಪೂರ್ಣಿತಂ ಮಾಂ
ತ್ವಯ್ಯೇವ ನಾಥ ಚರಿತಾರ್ಥಯ ನಿರ್ವಿವಿಕ್ಷುಮ್[1] ॥೫೬॥

(ನಾಥ) ಎಲೈ ಒಡೆಯನೇ (ಅಲ್ಪಾಸ್ಥಿರೈಃ) ಅತ್ಯಲ್ಪವೂ ಅಶಾಶ್ವತವೂ ಆದವೂ (ಅಸುಕರೈಃ) ಕಷ್ಟಕರವಾದವೂ (ಅಸುಖಾವಸಾನೈಃ) ದುಃಖದಲ್ಲಿ ಕೊನೆಯಾಗುವುವೂ (ದುಃಖಾನ್ವಿತೈಃ) ಮೊದಲಿಂದಲೂ ದುಃಖದಿಂದ ಕೂಡಿರುವುವೂ (ಅನುಚಿತೈಃ) ನಮಗೆ ತಕ್ಕವಲ್ಲವೂ (ಅಭಿಮಾನಮೂಲೈಃ) ಅಹಂಕಾರವನ್ನು ಕಾರಣವನ್ನಾಗಿಉಳ್ಳವೂ ಆದ (ಪ್ರತ್ಯಕ್ಪರಾಗನುಭವೈಃ) ಆತ್ಮಾನುಭವ ಹಾಗೂ ಪ್ರಕೃತ್ಯನುಭವಗಳಿಂದ (ಪರಿಘೂರ್ಣಿತಂ) ಭ್ರಾಂತನಾಗಿ ತಿರುಗುತ್ತಿರುವ ಆದರೆ (ತ್ವಯ್ಯೇವ ಸಿರ್ವಿವಿಕ್ಷುಮ್) ನಿನ್ನಲ್ಲೇ ಪ್ರವೇಶಿಸಲಿಚ್ಛಿಸುವ (ಮಾಂ) ನನ್ನನ್ನು (ಚರಿತಾರ್ಥಯ) ಕೃತಾರ್ಥನನ್ನಾಗಿಮಾಡು.

ಆಚಾರ್ಯರು ಈ ಶ್ಲೋಕದಲ್ಲಿ ಪುರುಷಾರ್ಥಸ್ವರೂಪವನ್ನು ನಿರೂಪಿಸಿ ಇತರ ವಿಷಯಗಳ ಹೇಯತ್ವವನ್ನು ತಿಳಿಸಿದ್ದಾರೆ. ಭಗವಂತನನ್ನೇ ಸೇರಬೇಕೆಂದು ನಮ್ಮ ಪುರುಷಾರ್ಥವಾಗಬೇಕು. ಗೀತೆಯಲ್ಲಿ 'ಭಕ್ತ್ಯಾತ್ವನನ್ಯಯಾ ಶಕ್ಯಃ ಅಹಮೇವಂ ವಿಧೋಽರ್ಜುನ | ಜ್ಞಾತಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂಚ ಪರಂತಪ ||' ಎಂದು ತಾನೇ ಹೇಳಿ ಭಕ್ತಿಯಿಂದಲೇ ಭಗವಂತನನ್ನರಿಯಲೂ, ಕಾಣಲೂ, ತತ್ತ್ವಶಃ ಪ್ರವೇಶಿಸಲೂ ಸಾಧ್ಯವಾಗುವುದೆಂದು ಹೇಳಿದ್ದಾನೆ. ಭಗವಂತನ ನಿತ್ಯಸಂಶ್ಲೇಷ ಹಾಗೂ ಅವನ ನಿತ್ಯಕೈಂಕರ್ಯ ನಮ್ಮ ಪರಮಪುರುಷಾರ್ಥ. ಭಗವದನುಭವರಹಿತವಾದ ಆತ್ಮಾನುಭವವಾಗಲೀ, ವಿಷಯಾನುಭವವಾಗಲೀ ನಮ್ಮ ಪುರುಷಾರ್ಥವಲ್ಲ. ಭಗವಂತನನ್ನುಳಿದು ಮಿಕ್ಕುದೆಲ್ಲಾ ಅಸಾರವಾದುವು. 'ಅಸಾರಮಲ್ಪಸಾರಂ ಚ ಸಾರಂ ಸಾರತರಂ ತ್ಯಜೇತ್, ಭಜೇತ್ಸಾರತಮಂ ಶಾಸ್ತ್ರೇ ರತ್ನಾಕರ ಇವಾಮೃತಂ' ಎಂದಂತೆ ಭಗವತ್ಪ್ರಾಪ್ತಿ ತತ್ಸಾಧನಗಳು ಮಾತ್ರ ನಮಗೆ ಬಹಳ ಉಪಾದೇಯವಾದವು. ಈ ಸಿದ್ಧಿ ನಮಗೆ ಒದಗಬೇಕಾದರೂ ಭಗವಂತನ ದಯೆಯೇ ಆವಶ್ಯಕ. ಆದ್ದರಿಂದಲೇ ಈ ಬೇಡಿಕೆ ಇಲ್ಲಿ ಬಂದಿದೆ. ಪ್ರತ್ಯಗನುಭವವೆಂಬುದು ಕೇವಲ ಆತ್ಮಾನುಭವ. ಪರಾಗನುಭವವೆಂಬುದು ವಿಷಯಾನುಭವ. ಇವುಗಳು ಮೇಲೆ ಹೇಳಿದ ದೋಷಸಪ್ತಕಗಳಿಂದ ಕೂಡಿವೆ. ಐಹಿಕವಾದ ಸುಖವಾಗಲೀ, ಪಾರಲೌಕಿಕವಾದ ಸ್ವರ್ಗಾದಿಸುಖಗಳಾಗಲೀ, ಬ್ರಹ್ಮರುದ್ರೇಂದ್ರಾದಿ ಪದವಿಗಳಾಗಲೀ ಈ ದೋಷಗಳಿಂದ ಕೂಡಿವೆ. ಆದರೆ ಭಗವದನುಭವವು ಇವುಗಳಿಗಿಂತ ವಿಲಕ್ಷಣವಾಗಿದೆ. ಆಬ್ರಹ್ಮಭವನಾದೇತೇ

ದೋಷಾಸ್ಸಂತಿ ಮಹಾಮುನೇ। ಅತ ಏವ ಹಿ ನೇಚ್ಛಂತಿ ಸ್ವರ್ಗಪ್ರಾಪ್ತಿಂ ಮನೀಷಿಣಃ॥' ಎಂದೂ

ಬ್ರಹ್ಮಣಃ ಸದನಾದೂರ್ಧ್ವಂ ತದ್ವಿಷ್ಣೋಃ ಪರಮಂ ಪದಮ್।
ಶುದ್ಧಂ ಸನಾತನಂ ಜ್ಯೋತಿಃ ಪರಂಬ್ರಹ್ಮೇತಿ ತದ್ವಿದುಃ॥
ನತತ್ರ ಮೂಢಾ ಗಚ್ಛಂತಿ ಪುರುಷಾ ವಿಷಯಾತ್ಮಕಾಃ।
ಡಂಭ ಲೋಭ ಮದ ಕ್ರೋಧ ದ್ರೋಹ ಮೋಹೈರಭಿದ್ರುತಾಃ॥
ನಿರ್ಮಮಾಃ ನಿರಹಂಕಾರಾಃ ನಿರ್ದ್ವಂದ್ವಾಃ ಸಂಯತೇಂದ್ರಿಯಾಃ।
ಧ್ಯಾನಯೋಗರತಾಶ್ಚೈವ ತತ್ರಗಚ್ಛಂತ ಸಾಧವ:॥

ಎಂಬುದಾಗಿಯೂ ನಿರೂಪಿಸಿರುವಂತೆ ಅನವಧಿಕವಾದ ಬ್ರಹ್ಮಾನುಭವವೇ ಪರಮಪುರುಷಾರ್ಥವೆಂದೂ ಈ ಮಹತ್ಫಲವನ್ನು ಅವನೇ ಕರುಣಿಸಿ ಸಲಹಬೇಕೆಂದೂ ಬೇಡಿದ್ದಾರೆ.

**ತೆತ್ತ್ವಾವಬೋಧಶಮಿತಪ್ರತಿಕೂಲವೃತ್ತಿಂ**
**ಕೈಂಕರ್ಯಲಬ್ಧಕರಣತ್ರಯಸಾಮರಸ್ಯಮ್।**
**ಕೃತ್ವಾ ತ್ವದನ್ಯವಿಮುಖಂ ಕೃಪಯಾ ಸ್ವಯಂ ಮಾಂ**
**ಸ್ಫಾತಿಂ ದೃಶೋಃ ಪ್ರತಿಲಭಸ್ವ ಜಗಜ್ಜನನ್ಯಾಃ ॥೫೭॥**

(ತ್ವತ್ತ್ವಾವ ಬೋಧ) ತತ್ತ್ವಜ್ಞಾನದಿಂದ, (ಶಮಿತ) ಅಳಿಸಲ್ಪಟ್ಟ (ಪ್ರತಿಕೂಲವೃತ್ತಿಂ) ಪ್ರತಿಕೂಲಾಚರಣೆಯುಳ್ಳವನೂ, (ಕೈಂಕರ್ಯ) ನಿನ್ನ ಆರಾಧನಾದಿಗಳಿಂದ, (ಲಬ್ಧ) ಪಡೆದ, (ಕರಣತ್ರಯ ಸಾಮರಸ್ಯಂ) ಶರೀರ, ಮತ್ತು ವಾಕ್ಕು ಮನಸ್ಸುಗಳ ಏಕರೂಪತೆಯುಳ್ಳವನೂ, (ತ್ವದನ್ಯವಿಮುಖಂ) ನಿನಗಿಂತ ಬೇರೆಯಾದುದರಲ್ಲಿ ಆಸಕ್ತಿ ಇಲ್ಲದವನೂ ಆಗುವಂತೆ, (ಮಾಂ ಕೃಪಯಾ ಕೃತ್ವಾ) ನನ್ನನ್ನು ದಯೆಯಿಟ್ಟು ಮಾಡಿ, (ಜಗಜ್ಜನನ್ಯಾಃ) ಜಗನ್ಮಾತೆಯ, (ದೃಶೋಃ) ನಯನಗಳೆರಡರ, (ಸ್ಫಾತಿಂ) ಅರಳುವಿಕೆಯ ಲಾಭವನ್ನು, (ಪ್ರತಿಲಭಸ್ವ) ಪಡೆದುಕೊ.

ನಮ್ಮ ಮೇಲೆ ಅವನು ದಯಾವರ್ಷವನ್ನು ಸುರಿಸಿ ನಮ್ಮನ್ನು ತನ್ನ ಕೈಂಕರ್ಯಕ್ಕೆ ಯೋಗ್ಯರನ್ನಾಗಿಸುವುದರಿಂದ ಲೋಕಜನನಿಯಾದ

ಶ್ರೀದೇವಿಯ ಸಂತೋಷವನ್ನು ಹೆಚ್ಚಿಸುತ್ತಾನೆ. ತನ್ನ ಮಕ್ಕಳಾದ ನಮ್ಮ ಮಂಗಳವನ್ನು ಕಂಡ ಶ್ರೀದೇವಿ ಹರ್ಷದಿಂದ ಅರಳಿದ ನೇತ್ರಗಳುಳ್ಳವಳಾಗಿ ಭಗವಂತನ ಕಡೆಗೆ ನೋಟವನ್ನು ಚೆಲ್ಲುತ್ತಾಳೆ. ಅನುಗ್ರಹೈಕಮಯಿಯೂ ಪುರುಷಾಕಾರಭೂತೆಯೂ ಆದ ದೇವಿಯು ಭಗವಂತನು ನಮ್ಮನ್ನು ರಕ್ಷಿಸಿದಾಗ ಅನುಭವಿಸುವ ಆನಂದ ಮಿತಿಯಿಲ್ಲದುದು. ದೇವಿಯ ಸಂತೋಷವೇ ದೇವದೇವನ ಸಂತೋಷವೂ ಆದಕಾರಣ ನಮ್ಮ ರಕ್ಷಣೆಯ ಫಲವೂ ಅವನದೇ ಆಗುತ್ತದೆ.

ಇತ್ಥಂ ಸ್ತುತಿಪ್ರಭೃತಯೋ ಯದಿ ಸಂಮತಾಃ ಸ್ಯು-
ರ್ಯದ್ವಾಽಪರಾಧಪದವೀಷ್ವಭಿಸಂವಿಶನ್ತಿ ।
ಸ್ತೋಕಾನುಕೂಲ್ಯಕಣಿಕಾವಶವರ್ತಿನಸ್ತೇ
ಪ್ರೀತಿಕ್ಷಮಾಪ್ರಸರಯೋರಹಮಸ್ಮಿ ಲಕ್ಷ್ಯಮ್ ॥೫೮॥

(ಇತ್ಥಂ) ಈ ಬಗೆಯಾದ (ಸ್ತುತಿಪ್ರಭೃತಯಃ) ಸ್ತೋತ್ರಗಳೇಮೊದಲಾದವು (ಯದಿ ಸಂಮತಾಃಸ್ಯುಃ) ಒಂದುವೇಳೆ ನಿನಗೆ ಒಪ್ಪಿಗೆಯಾಗುತ್ತವೆಯೋ(ಯದ್ವಾ) ಅಥವಾ (ಅಪರಾಧಪಗವೀಷು) ತಪ್ಪಿನ ಮಾರ್ಗಗಳಲ್ಲಿ (ಅಭಿಸಂವಿಶಂತಿ) ಹೋಗುತ್ತವೆಯೋ ? ಆದರೆ (ಸ್ತೋಕಾನುಕೂಲ್ಯ) ಅತ್ಯಲ್ಪವಾದ ಅನುಕೂಲ್ಯದ (ಕಣಿಕಾವಶವರ್ತಿನಃ) ಹನಿಗೂ ವಶನಾಗಿ ವರ್ತಿಸುವ (ತೇ) ನಿನ್ನ (ಪ್ರೀತಿಕ್ಷಮಾಪ್ರಸರಯೋಃ)ಪ್ರೀತಿ ಅಥವಾ ಕ್ಷಮೆಯ ಪ್ರಸಾರಕ್ಕೆ (ಅಹಂ ಲಕ್ಷ್ಯಮ್ ಅಸ್ಮಿ) ನಾನು ಪಾತ್ರನಾಗಿದ್ದೇನೆ.

ತಾವು ಮಾಡಿದ ಸ್ತೋತ್ರದ ಉಪಸಂಹಾರಮಾಡುತ್ತಾ ಆಚಾರ್ಯರು ಈ ಬಗೆಯ ಸ್ತೋತ್ರಗಳಿಂದ ಭಗವಂತನ ಕ್ಷಾಂತಿಯನ್ನು ಬೇಡುತ್ತಾರೆ. ಯಾವ ಭಗವಂತನನ್ನು ವೇದಗಳು ಕೊಂಡಾಡಿ ಮುಗಿಸಲಾಗಲಿಲ್ಲವೋ ಅಂಥ ವಾಕ್ಕಿಗೂ ಮನಸ್ಸಿಗೂ ದೂರನಾದ ದೇವದೇವನನ್ನು ಅವನಿಗೆ ತಕ್ಕ ಹಾಗೆ ಸ್ತುತಿಸುವುದು ಅವನಿಗೆ ಇಷ್ಟವೋ ಇಲ್ಲವೋ? ನಾವು ತಪ್ಪನ್ನೇ ಮಾಡುವೆವೊ ಏನೋ ಎಂಬ ಭಯ ಉಂಟಾದೀತು. 'ಯತೋ ವಾಚೋ ನಿವರ್ತಂತೇ,' 'ಮಾಂ ತು ವೇದ ನ ಕಶ್ಚನ'. ನ ಯಸ್ಯ ರೂಪಂ ನ ಬಲಪ್ರ

ಭಾವೌ ನ ಚ ಸ್ವಭಾವಃ ಪರಮಸ್ಯ ಪುಂಸಃ | ವಿಜ್ಞಾಯತೇ ಶರ್ವ ಪಿತಾಮಹಾದ್ಯೈಃ ಸ್ತ್ವಂ ವಾಸುದೇವಂ ಪ್ರಣಮಾಮ್ಯಚಿಂತ್ಯಂ || ಎಂದು ಭಗವಂತನ ಮಹಿಮೆಯ ದುರುವಗಾಹತ್ವವನ್ನು ಹೇಳಿದೆ. ನಮ್ಮ ಸ್ತುತಿ ಅವನಿಗೆ ಸಮ್ಮತವೊ ಇಲ್ಲವೋ ಎಂಬುದಕ್ಕೆ ಉತ್ತರ ಶ್ಲೋಕದ ಉತ್ತರಾರ್ಧವಾಗಿದೆ ನಾವು ಸ್ತುತಿಸುವುದು ಅವನಿಗೆ ಸಮ್ಮತವಾದರೆ ಅವನ ಪ್ರೀತಿ ನಮ್ಮಮೇಲುಂಟಾಗಲಿ. ನಾವು ಸ್ತುತಿಸುವುದು ಅಪರಾಧವೇ ಆದರೆ ಅವನ ಕ್ಷಮೆ ನಮ್ಮ ಮೇಲಿರಲಿ. ಅಂತೂ ನಾವು ಅವನ ಪ್ರೀತಿಗೂ ಕ್ಷಮೆಗೂ ಅರ್ಹರಾಗಿದ್ದೇವೆ ಎಂದು ನಿವೇದಿಸಿದ್ದಾರೆ.

**ಸ್ನೇಹೋಪಪನ್ನವಿಷಯಃ ಸ್ವದಶಾವಿಶೇಷಾ-**
**ದ್ಭೂಯಸ್ತಮಿಸ್ರಶಮನೀಂ ಭುವಿ ವೇಙ್ಕಟೇಶಃ |**
**ದಿವ್ಯಾಂ ಸ್ತುತಿಂ ನಿರಮಿಮೀತ ಸತಾಂ ನಿಯೋಗಾ-**
**ದ್ದೀಪಪ್ರಕಾಶಶರಣಾಗತಿದೀಪಿಕಾಖ್ಯಾಮ್ ||೫೯||**

(ಸ್ನೇಹೋಪಪನ್ನ ವಿಷಯಃ) ಭಗವದ್ಭಕ್ತಿಯಿಂದ ಯುಕ್ತವಾದ ವಿಷಯವುಳ್ಳ, (ವೇಂಕಟೇಶಃ) ವೇಂಕಟನಾಥರು, (ಸ್ವದಶಾವಿಶೇಷಾತ್) ತೀವ್ರವಾದ ತಮ್ಮ ಭಕ್ತ್ಯವಸ್ಥೆಯ ವಿಶೇಷದಿಂದ, (ತಮಿಸ್ರಶಮನೀಂ) ಅಜ್ಞಾನದ ಕತ್ತಲನ್ನು ಕಳೆಯುವ (ದೀಪಪ್ರಕಾಶ ಶರಣಾಗತಿ ದೀಪಿಕಾಖ್ಯಾಂ) ದೀಪಪ್ರಕಾಶನಲ್ಲಿ ಒಪ್ಪಿಸಿದ ಶರಣಾಗತಿದೀಪಿಕೆ ಎಂಬ ಹೆಸರಿನ, (ದಿವ್ಯಾಂಸ್ತುತಿಂ) ಈ ದಿವ್ಯವಾದ ಸ್ತೋತ್ರವನ್ನು (ಸತಾಂ ನಿಯೋಗಾತ್) ಸಜ್ಜನರ ಅಪ್ಪಣೆಗನುಸಾರವಾಗಿ, (ಭುವಿ) ಈ ಲೋಕದಲ್ಲಿ, (ಭೂಯಃ) ಮತ್ತೆ, (ನಿರಮಿಮೀತ) ವಿರಚಿಸಿದರು.

ಈ ಶ್ಲೋಕದಲ್ಲಿ ಆ ಚಾರ್ಯರು ಈ ಸ್ತೋತ್ರ ರಚನೆಯ ಪ್ರಕಾರವನ್ನು ತಿಳಿಸಿದ್ದಾರೆ. ಅನೇಕಾನೇಕ ಸ್ತೋತ್ರಗಳನ್ನು ರಚಿಸಿದ ಮೇಲೆಯೂ ಮತ್ತೆ ಈ ಸ್ತೋತ್ರದ ರಚನೆ ಆಯಿತು. ಇದು ಕತ್ತಲನ್ನು ಕಳೆಯುವ ದೀಪದಂತೆ. ದೀಪಪ್ರಕಾಶನಲ್ಲಿ ಶರಣಾಗತಿ ಮಾಡುವುದನ್ನು ತೋರಿಸುವ ದೀಪ ಇದು. ಇದು ದೀಪವಾದ ಕಾರಣ ಅದಕ್ಕೆ ಆವಶ್ಯಕವಾದ ಸ್ನೇಹ (ತೈಲ–ಭಕ್ತಿ)

(ಅಸಹಾಯಕಾ–ಬತ್ತಿ) ದಶಾ ಮುಂತಾದವು ಇವೆ. ಭಗವಂತನಲ್ಲಿ ಶರಣು. ಹೋದ ಸಜ್ಜನರ ಅಪ್ಪಣೆಯಂತೆ ಈ ಸ್ತೋತ್ರದ ನಿರ್ಮಾಣವಾಯಿತು. ಇದರಿಂದ ಆಚಾರ್ಯರ ಭಾಗವತನಿಷ್ಠೆಯೂ ವ್ಯಕ್ತವಾಯಿತು. ಸಂಸಾರದಲ್ಲಿ ತೊಳಲುವ ಚೇತನರು ಶರಣಾಗತಿಯನ್ನನುಷ್ಠಿಸಲು ಇದು ಪ್ರೇರಕವಾಗುತ್ತದೆ. ಹಾಗೆಯೇ ಪ್ರಪನ್ನರಿಗೆ ಸ್ವಯಂಪ್ರಯೋಜನತಯಾ ನಿತ್ಯಾನುಸಂಧಾನಕ್ಕೆ ಅರ್ಹವಾದುದು. ಹೀಗೆ ಶ್ರೀಮದಾಚಾರ್ಯರು ದೀಪಪ್ರಕಾಶನಲ್ಲಿ ತಮಗಿರುವ ಭಕ್ತ್ಯತಿಶಯದಿಂದ ಹಚ್ಚಿಸಿಟ್ಟಿರುವ ಶಾಶ್ವತವಾದ ನಂದಾದೀಪ ಈ ಶರಣಾಗತಿದೀಪಿಕೆ.

ಕವಿತಾರ್ಕಿಕಸಿಂಹಾಯ ಕಲ್ಯಾಣಗುಣಶಾಲಿನೇ ।
ಶ್ರೀಮತೇ ವೇಂಕಟೇಶಾಯ ವೇದಾಂತಗುರುವೇ ನಮಃ ॥

---